# ಸಾಧನೆಗೆ ಅಂಗವಿಕಲತೆ ಸಮಸ್ಯೆಯೇ ಅಲ್ಲ. . .

ಅಂಗವಿಕಲರಲ್ಲಿ ಹುದುಗಿರುವ ಪ್ರತಿಭೆಯು ಬೆಳಕಿಗೆ ಬರುವಂತಾಗಲು ಸರ್ಕಾರ ಅವರಿಗಾಗಿ ಹಲವಾರು ಕಲ್ಯಾಣ ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೆ ತಂದಿದೆ.

## ಅಂಗವಿಕಲರ ಕಲ್ಯಾಣ ಕಾರ್ಯಕ್ರಮಗಳು

- ಶಿಕ್ಷಣ
- ಉದ್ಯೋಗ ಮತ್ತು ತರಬೇತಿ
- ಪುನರ್ವಸತಿ
- ಸಾಮಾಜಿಕ ಭದ್ರತೆ
- ವಿದ್ಯಾರ್ಥಿ ವೇತನ
- ಶ್ರವ್ಯ ಗ್ರಂಥಾಲಯ ಸ್ಥಾಪನೆ
- ಸ್ವಯಂ ಉದ್ಯೋಗ
- ದೂರವಾಣಿ ಬೂತ್ ಸೌಲಭ್ಯ
- ಸಾಲ ಸೌಲಭ್ಯ
- ವಿಮಾ ಯೋಜನೆ
- ಮಾಸಿಕ ನಿರ್ವಹಣೆ ಭತ್ಯೆ (ರೂ. 400/–)
- ಉದ್ಯೋಗದಲ್ಲಿ ಶೇಕಡ 5ರಷ್ಟು ಮೀಸಲು
- ವಿಶೇಷ ವಾಹನ
- ರಿಯಾಯಿತಿ ಬಸ್ ಪಾಸ್
- ಅಂಗವಿಕಲರಿಗಾಗಿ ಶಾಲೆಗಳು

**ಉದಾಸೀನತೆ ಬಿಡಿ - ಉತ್ತೇಜನ ನೀಡಿ**


ಕರ್ನಾಟಕ ವಾರ್ತೆ

# ನಮ್ಮ ಮಾನಸ

**ಡಿಸೆಂಬರ್ 2010**

ಸಂಪುಟ : 4 ಸಂಚಿಕೆ : 8

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*✆ : 26757159*

*ಸಂಪಾದಕ ಮಂಡಳಿ*
**ಚಂಪಾವತಿ ಹೆಚ್.ಎಸ್., ಸವಿತಾ ಎ.**
**ವೆಂ. ವನಜಾ, ಗೀತಾ, ಎಚ್.ಎಸ್. ಪುಷ್ಪಾ.**

*ಸಲಹೆ – ಸಹಕಾರ*
**ಇಳಾ ವಿಜಯಾ, ಸುಮಿತ್ರಾಬಾಯಿ ಬಿ.ಎನ್.**

*ಮಾನಸ ಬಳಗ*
**ತಸ್ನೀಂ ತಾಜ್, ವೇದವಲ್ಲಿ ಜಿ.ವಿ.**
**ವತ್ಸಲ ವೈ.ಎಸ್., ಶ್ಯಾಮಲ, ತಾಜುಮಾ**

*ಚಂದಾ ವಿವರ*

| | |
|---|---|
| **ಬಿಡಿಪ್ರತಿ** | **8–00 ರೂ.** |
| **ವಾರ್ಷಿಕ ಚಂದಾ** | **100–00 ರೂ.** |
| (ವಿಶೇಷ ಸಂಚಿಕೆಯೊಂದಿಗೆ) | |
| **ಸಂಸ್ಥೆಗಳಿಗೆ** | **150–00 ರೂ.** |

## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

— — —

***ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ***

**ವೆಂ. ವನಜ**

*2329, 12ನೇ ಮೈನ್, 2ನೇ ಹಂತ,*
*ವಿಜಯನಗರ, ಮೈಸೂರು – 570 017*

ಪ್ರಾರಂಭ : 'ಮಾನುಷಿ' (1985ರಲ್ಲಿ),
ಅನಂತರ 'ಮಾನಸ',
ಈಗ 'ನಮ್ಮ ಮಾನಸ'




ಸಂಪಾದಕೀಯ

# ಸೂಕಿ, ಇರೋಮ್‌ರ ಹೋರಾಟವೂ ರಾಜಕಾರಣಿಗಳ ಕಣ್ಣು ತೆರೆಸಲಾರದೆ?

ರಾಜಕೀಯದಲ್ಲಿ ನೈತಿಕತೆಯೇ ಮಾಯವಾಗಿ ಎಲ್ಲವೂ ಕಾಂಚಾಣಮಯವಾಗುತ್ತಿರುವ ಇಂದಿನ ಸನ್ನಿವೇಶದಲ್ಲಿ ಮಹಿಳೆಯರಿಗೆ ರಾಜಕಾರಣ ಏತಕ್ಕೆ ಎಂಬ ಅಪಹಾಸ್ಯದ ಮಾತುಗಳು ಕೇಳಿ ಬರುತ್ತಿವೆ. ಈಗಿರುವ ಮಹಿಳಾ ರಾಜಕಾರಣಿಗಳಿಗೂ ಹೋರಾಟದ ನೆಲೆಗಳಿಲ್ಲದೇ– ಪುರುಷ ರಾಜಕಾರಣದ ಭಾಗಗಳಾಗಿ, ಅವರ ದಾಳಿಗಳಂತಿರುತ್ತಾರೆ. ಇದಕ್ಕೆ ಅಲ್ಲೊಂದು ಇಲ್ಲೊಂದು ಅಪವಾದವೂ ಇರಬಹುದು. ಆದರೆ ಪಂಚಾಯತ್ ಪಾರ್ಲಿಮೆಂಟ್‌ನಲ್ಲಿ ಕೆಲಸ ಮಾಡುವ ಮಹಿಳಾ ರಾಜಕಾರಣಿಗಳು ರಾಜಕೀಯದಲ್ಲಿ ತಮ್ಮದೇ ಎನ್ನುವ ಛಾಪು ಮೂಡಿಸುವಲ್ಲಿ ವಿಫಲರಾಗಿದ್ದಾರೆ. ಪಕ್ಷದ ವರಿಷ್ಠರಾಗಿರುವ, ನಾಯಕಿಯರಾಗಿರುವ ಹಲವು ಪಕ್ಷಗಳ ಮುಖಂಡರನ್ನು ಹೊರತು ಪಡಿಸಿದರೆ, ರಾಜಕಾರಣದಲ್ಲಿ ಮಹಿಳೆಯರ ಹೋರಾಟದ ಚುರುಕು ಮುಟ್ಟಿಸುವವರು ಕಡಿಮೆಯೇ. ಇಂತಹ ಸನ್ನಿವೇಶದಲ್ಲಿ ಸೇನಾಡಳಿತದ ವಿರುದ್ಧ ಧ್ವನಿ ಎತ್ತಿ, ಜೀವದ ಹಂಗನ್ನು ತೊರೆದು ಪ್ರಜಾಸತ್ತಾತ್ಮಕ ಹೋರಾಟಕ್ಕೆ ತಮ್ಮ ಜೀವಗಳನ್ನು ಪಣವಾಗಿ ಒಡ್ಡಿರುವ ಆಂಗ್‌ಸಾನ್ ಸೂಕಿ ಹಾಗೂ ಇರೋಮ್ ಶರ್ಮಿಳಾರಂತಹ ಹೋರಾಟಗಾರರು ನಮ್ಮ ರಾಜಕಾರಣಿಗಳ ಕಣ್ಣು ತೆರೆಯಿಸಬೇಕಾಗಿದೆ.

ಮ್ಯಾನ್ಮಾರ್‌ನ ಸ್ವಾತಂತ್ರ್ಯದ ಹಾಡುಹಕ್ಕಿ ಎಂದೇ ಕರೆಯಲ್ಪಡುವ ಆಂಗ್‌ಸಾನ್ ಸೂಕಿಯು ಬಂದೂಕಿನ ನಳಿಕೆಗೆ ಎದೆಯೊಡ್ಡಿ ನಿಂತಂತೆ ಮಣಿಪುರದ ಅರೋಮ್ ಶರ್ಮಿಳಾ ಭಾರತ ಸರ್ಕಾರವನ್ನು ಮಣಿಸಲು ಕಳೆದ ಹತ್ತು ವರ್ಷಗಳಿಂದ ಆಮರಣಾಂತ ಉಪವಾಸ ಮಾಡುತ್ತಿದ್ದಾರೆ. ಮ್ಯಾನ್ಮಾರ್‌ನ ಪ್ರಜಾಪ್ರಭುತ್ವದ ಅಸ್ತಿತ್ವಕ್ಕಾಗಿ ಆಂಗ್‌ಸಾನ್ ಸೂಕಿ ಅವರು 1962ರಲ್ಲಿ ಸೇನಾಕ್ರಾಂತಿ ನಡೆಸಿ ಅಧಿಕಾರದ ಗದ್ದುಗೆಗೆ ಏರಿದ ನೆವಿನ್ ಸರ್ಕಾರ, 1988ರ ಸೆಪ್ಟೆಂಬರ್‌ನಲ್ಲಿ ನೆವಿನ್ ಸರ್ಕಾರವನ್ನು ಕಿತ್ತೆಸೆದ ಸೇನಾಧಿಕಾರಿಯ ಇನ್ನೊಂದು ಗುಂಪು (ಎಸ್.ಎಚ್.ಓ.ಆರ್.ಸಿ.) ಹಾಗೂ 1997ರಿಂದ ಅಸ್ತಿತ್ವದಲ್ಲಿರುವ (ಎಸ್.ಪಿ.ಡಿ.ಸಿ) ಸೇನಾಧಿಕಾರದ ಮಿಲಿಟರಿ ಆಡಳಿತದ ವಿರುದ್ಧ ಸತತವಾಗಿ ಶಾಂತಿಯುತ ಹೋರಾಟ ನಡೆಸುತ್ತಲೇ ಬಂದಿದ್ದಾರೆ. ಮಣಿಪುರದ ರಾಜಧಾನಿ ಇಂಫಾಲದಲ್ಲಿ ಸೇನೆಗೆ ನೀಡಿರುವ ವಿಶೇಷಾಧಿಕಾರ ಕಾಯ್ದೆಯನ್ನು ಹಿಂತೆಗೆದು ಕೊಳ್ಳುವಂತೆ ಆಗ್ರಹಿಸಿರುವ ಇರೋಮ್ ಶರ್ಮಿಳಾ ಮಣಿಪುರದ ಮಹಿಳೆಯರು ದಶಕಗಳಿಂದ ನಡೆಸುತ್ತಿರುವ ಹೋರಾಟದ ಮುಖವಾಣಿಯಾಗಿದ್ದಾರೆ. ನವೆಂಬರ್ 2010ಕ್ಕೆ 10 ವರ್ಷ ಮುಗಿದಿರುವ ಇವರ ಉಪವಾಸ ಸತ್ಯಾಗ್ರಹ ಸಹ ಪ್ರಜಾಸತ್ತಾತ್ಮಕ ಹೋರಾಟವನ್ನು ಶಾಂತಿಯಿಂದಲೇ ನಡೆಸುತ್ತಿರುವುದನ್ನು ನಾವು ಗಮನಿಸಬಹುದಾಗಿದೆ.

ಮ್ಯಾನ್ಮಾರ್‌ನ ಸೇನಾಡಳಿತವು ದಬ್ಬಾಳಿಕೆಯಿಂದ ಸಾವಿರಾರು ಜನರನ್ನು, ಅಮಾಯಕರನ್ನು, ಪ್ರಜಾಸತ್ತಾತ್ಮಕ ಮೌಲ್ಯಗಳಿಗಾಗಿ ಪ್ರತಿಭಟಿಸುವವರನ್ನು, ಧ್ವನಿ ಎತ್ತುವವರನ್ನು ಕಗ್ಗೊಲೆಗಯ್ಯುತ್ತಲೇ ಬಂದಿದೆ. 1990ರಲ್ಲಿ ಸೂಕಿ ನೇತೃತ್ವದ ಎನ್.ಎಲ್.ಡಿ. ಪಕ್ಷಕ್ಕೆ ಬಹುಮತವಿದ್ದಾಗಲೂ ಜನರ ತೀರ್ಪನ್ನು ತಿರಸ್ಕರಿಸಿದ ಸೇನಾಡಳಿತ ಸೂಕಿಯನ್ನು 20 ವರ್ಷಗಳ ಕಾಲ ಗೃಹಬಂಧನದಲ್ಲಿ ಇರಿಸಿತು. ಇಂದು ಸೂಕಿಯ ಬಿಡುಗಡೆಯಾಗಿದೆ, ನಿಜ. ನೊಬೆಲ್ ಪ್ರಶಸ್ತಿಯ ಜೊತೆಗೆ ಹಲವಾರು ಅಂತರರಾಷ್ಟ್ರೀಯ ಪ್ರಶಸ್ತಿ ಪಡೆದಿರುವ ಸೂಕಿಯ ಮುಂದಿನ ರಾಜಕೀಯ ಹೆಜ್ಜೆಯೇನೂ ಅಷ್ಟು ಸುಲಭವಾದದ್ದಲ್ಲ. ಮ್ಯಾನ್ಮಾರ್‌ನಲ್ಲಿ ಇನ್ನೂ 2000 ರಾಜಕೀಯ ಕೈದಿಗಳನ್ನು ಸೇನಾಡಳಿತ ಬಿಡುಗಡೆಗೊಳಿಸಿಲ್ಲ. ಅದಕ್ಕಾಗಿ ಆಕೆ ಹೋರಾಟ ನಡೆಸಬೇಕಾಗಿದೆ. ಬಿಡುಗಡೆಯಾದರೆ ಎಲ್ಲರೂ ಬಿಡುಗಡೆಯಾಗಬೇಕು, ಇಲ್ಲದಿದ್ದರೆ ಎಲ್ಲರೂ ಬಂಧನದಲ್ಲಿಯೇ ಇರಬೇಕು ಎಂದು ಹೇಳುತ್ತಾ ಸೂಕಿ ಈಗಾಗಲೇ ತಮ್ಮ ಹೋರಾಟದ ಹಾದಿಯನ್ನು ಸ್ಪಷ್ಟಪಡಿಸುತ್ತಿದ್ದಾರೆ. ಪ್ರಜಾಸತ್ತಾತ್ಮಕ ಹೋರಾಟದ ರಾಜಕಾರಣದಲ್ಲಿ ನಂಬಿಕೆಯಿರುವ ಸೂಕಿಯ ರಾಜಕಾರಣಕ್ಕೆ, ಹೋರಾಟಕ್ಕೆ ಅವಕಾಶ ಸಿಗಬಹುದೇ ಎಂಬುದನ್ನು ಕಾದು ನೋಡಬೇಕಾಗಿದೆ.

ಕಾಶ್ಮೀರ ಹಾಗೂ ಈಶಾನ್ಯ ರಾಜ್ಯಗಳಲ್ಲಿನ ಮಾನವ ಹಕ್ಕುಗಳ ಉಲ್ಲಂಘನೆಯ ಕಡತ ಬಿಚ್ಚಿದರೆ ನೂರಾರು ಅಮಾಯಕರ, ನಿರಪರಾಧಿಗಳ ಕಗ್ಗೊಲೆಗಳು ನಡೆದಿರುವುದು ಸ್ಪಷ್ಟವಾಗುತ್ತದೆ. ಉಗ್ರರು, ಬಂಡುಕೋರರನ್ನು ನಿಗ್ರಹಿಸಲು ಸೇನೆಗೆ ನೀಡಿರುವ ವಿಶೇಷಾಧಿಕಾರದ ಕಾಯ್ದೆಯಿಂದಾಗಿ

## ಒಳಗಿನ ಪುಟಗಳಲ್ಲಿ....



*ಈ ಸಂಚಿಕೆಯ ಪ್ರಾಯೋಜಕರು :*
**ಡಿ.ಎಸ್. ಸುರೇಶ್ (ಚಿಕ್ಕಸುರೇಶ)**

ಈಶಾನ್ಯ ರಾಜ್ಯಗಳಲ್ಲಿನ ಜನರು ಆತಂಕದಿಂದ ಬದುಕುತ್ತಿದ್ದಾರೆ. ಅನೇಕ ಹೆಣ್ಣುಮಕ್ಕಳು ಅತ್ಯಾಚಾರಕ್ಕೆ ಒಳಗಾಗುತ್ತಿದ್ದಾರೆ. ಅತ್ಯಾಚಾರಕ್ಕೊಳಗಾಗಿ ಕಗ್ಗೊಲೆಯಾದ ಮನೋರಮಾ ಘಟನೆಯನ್ನು ಮಣಿಪುರದ ತಾಯಂದಿರು ಬೆತ್ತಲೆಯಾಗಿ ಪ್ರತಿಭಟಿಸಿ "ತಮ್ಮ ಮೇಲೂ ಅತ್ಯಾಚಾರ ಆಗಲಿ" ಎಂದು ಸೈನಿಕರಿಗೆ ಸವಾಲು ಹಾಕಿ ಪ್ರತಿಭಟಿಸಿದ್ದಾರೆ. ನೂರಾರು ನಾಪತ್ತೆ ಪ್ರಕರಣಗಳ ವಿರುದ್ಧ ಕೂಡಾ ಇಲ್ಲಿ ಮಹಿಳೆಯರು ಧ್ವನಿ ಎತ್ತಿದ್ದಾರೆ.

ಮ್ಯಾನ್ಮಾರ್ ಆಗಲಿ, ಮಣಿಪುರ ಆಗಲಿ ಅಥವಾ ಕಾಶ್ಮೀರ ಆಗಲಿ ಸೇನಾಧಿಕಾರಿಗಳ ಆಡಳಿತ ಎಲ್ಲೆಲ್ಲಿ ಅಟ್ಟಹಾಸಗೈಯ್ಯುತ್ತಿದೆಯೋ ಅಲ್ಲೆಲ್ಲಾ ಪ್ರಜಾಪ್ರಭುತ್ವದ ಕಗ್ಗೊಲೆಯ ಜೊತೆಗೆ ಮಹಿಳೆಯರ ಮೇಲಿನ ಕ್ರೌರ್ಯ ನಿತ್ಯದ ಬದುಕನ್ನು ಅಸಹನೀಯವಾಗಿಸಿದೆ. ಕ್ರೌರ್ಯದ ಹಿನ್ನೆಲೆಯಿಂದಾಗಿಯೇ "ಕಾಶ್ಮೀರಕ್ಕೆ ಸ್ವಾಯತ್ತತೆ ನೀಡಿ" ಎಂದು ಲೇಖಕಿ ಅರುಂಧತಿರಾಯ್ ತಮ್ಮ ನಿಲುವನ್ನು ವ್ಯಕ್ತಪಡಿಸಿರಬಹುದು. ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಅವರ ನಿಲುವುಗಳನ್ನು ಅಭಿವ್ಯಕ್ತಪಡಿಸಲೂ ಸಾಧ್ಯವಾಗದಂತಹ ಒಂದು ಮತೀಯ ರಾಜಕೀಯ ವಾತಾವರಣ ಈಗಾಗಲೇ ನಮ್ಮಲ್ಲಿ ಏರ್ಪಟ್ಟಿದೆ. ಆಕೆಯ ಮನೆಯನ್ನು ಧ್ವಂಸ ಮಾಡುವ ಮಟ್ಟದ ಅಮಾನವೀಯತೆ! ಸರಿ ತಪ್ಪು ನಿರ್ಣಯಿಸಲು ನ್ಯಾಯಾಲಯ ಇದೆ. ಕಾನೂನು ಕೈಗೆತ್ತಿಕೊಳ್ಳುವುದು ಅಪರಾಧ.

ಒಂದೆಡೆ ಸೇನಾಧಿಕಾರ, ಒಂದೆಡೆ ಬಂಡುಕೋರರು ಹಾಗೂ ಇನ್ನೊಂದೆಡೆ ಉಗ್ರವಾದಿಗಳು ವಿಶ್ವದ ಎಲ್ಲೆಡೆ ಮಹಿಳೆಯರ ಬದುಕನ್ನು ಅಸ್ಥಿರಗೊಳಿಸತೊಡಗಿದ್ದಾರೆ. ಅವ್ಯಾಹತವಾಗಿ ಅವರ ಮೇಲೆ ಹಿಂಸೆಯನ್ನು ಪ್ರಚೋದಿಸತೊಡಗಿದ್ದಾರೆ. ನೈತಿಕ ಮೌಲ್ಯಗಳನ್ನು ಗಾಳಿಗೆ ತೂರಿ ಬದುಕುವುದೇ ಅಸಾಧ್ಯ ಎನ್ನುವಂತಹ ಸ್ಥಿತಿಗೆ ಮಹಿಳೆಯರನ್ನು ತಳ್ಳುತ್ತಿದ್ದಾರೆ. ಇಂತಹ ಸಂದರ್ಭದಲ್ಲಿ ಮಣಿಪುರದ ಇರೋಮ್ ಶರ್ಮಿಳಾ ಹಾಗೂ ಮ್ಯಾನ್ಮಾರ್‌ನ ಆಂಗ್‌ಸಾನ್‌ಸೂಕಿ ತಮ್ಮ ಶಾಂತಿಯುತ ಹೋರಾಟದಿಂದಲೇ ಬಂದೂಕಿನ ನಳಿಕೆಗೆ ಎದೆಯೊಡ್ಡಿದ್ದಾರೆ. ನಾವು ಕ್ರೌರ್ಯವನ್ನೂ, ದುರಾಡಳಿತವನ್ನೂ ಸಹಿಸುವುದಿಲ್ಲ ಎಂಬ ಸಂದೇಶವನ್ನು ಸೈನ್ಯಾಧಿಕಾರಿ ಆಡಳಿತಗಳಿಗೆ, ಸರ್ಕಾರಗಳಿಗೆ, ವಿಶ್ವಕ್ಕೆ ರವಾನಿಸಿದ್ದಾರೆ. ಇಂತಹ ವಿಷಮ ಸ್ಥಿತಿಯನ್ನು ನೋಡುತ್ತಾ ನಾವು ಸುಮ್ಮನೇ ಕೂರುವುದಿಲ್ಲ ಎಂಬ ಮಹಿಳಾ ಸಂದೇಶಕ್ಕೆ ಸಂಕೇತವಾಗಿ ನಮ್ಮ ಮುಂದೆ ಸೂಕಿ ಹಾಗೂ ಇರೋಮ್ ಶರ್ಮಿಳಾ ನಿಂತಿದ್ದಾರೆ.

ನಮ್ಮ ಮಹಿಳಾ ರಾಜಕಾರಣಿಗಳು ಇವರಿಂದ ಕಲಿಯುವುದು ಸಾಕಷ್ಟಿದೆ. ನಮಗೆ ಹೋರಾಟದ ಹಾದಿಯನ್ನು ತೋರಿಸಬಲ್ಲಂತಹ ಚಿಂತನಶೀಲ ಹೋರಾಟಗಾರ್ತಿಯರು ನಮ್ಮ ನಡುವೆ ಬದುಕುತ್ತಿದ್ದಾರೆ ಎಂಬುದೇ ನಮಗೆ ಸ್ಫೂರ್ತಿಯ ವಿಚಾರವಾಗಬೇಕಿದೆ. 62 ವರ್ಷದ ಸೂಕಿ, 38 ವರ್ಷದ ಇರೋಮ್ ಶರ್ಮಿಳಾ–ಇಬ್ಬರ ಪ್ರತಿಭಟನೆಯ ಹಾದಿ, ಅವರ ಬದುಕಿನ ಚಿತ್ರಣಗಳು ನಮ್ಮನ್ನು ದೃಢಗೊಳಿಸಬೇಕಾಗಿದೆ. 20 ವರ್ಷದ ಮೇಲೆ ಬಿಡುಗಡೆಯಾದ ಸೂಕಿ ನಾವು ಮಾಡಲೇಬೇಕಾದ, ನಿರ್ವಹಿಸಲೇಬೇಕಾದ ಕೆಲಸಗಳು ಬೇಕಾದಷ್ಟಿವೆ ಎನ್ನುತ್ತಾರೆ. 62 ವರ್ಷದ ಸೂಕಿ 20 ವರ್ಷದ ಬಂಧನದಿಂದ ಧೃತಿಗೆಟ್ಟಿಲ್ಲ. 38 ವರ್ಷದ ಇರೋಮ್ ಶರ್ಮಿಳಾಗೆ 10 ವರ್ಷದ ಉಪವಾಸ ಕೂಡಾ ಧೃತಿಗೆಡಿಸಿಲ್ಲ. ನಾವು ಮಹಿಳೆಯರು ರಾಜಕಾರಣದಲ್ಲಿ ಕ್ರಿಯಾಶೀಲರಾಗಿ ರಾಜಕಾರಣಕ್ಕೆ ಹೊಸ ಭಾಷ್ಯ ಬರೆಯಬಲ್ಲೆವು ಎನ್ನುವುದರ ಸಂಕೇತ ಇದಲ್ಲವೇ?

* * *

**'ನಮ್ಮ ಮಾನಸ'**ದ ಬೆನ್ನೆಲುಬಾಗಿರುವ ಡಾ. ಇಳಾ ವಿಜಯ ಅವರಿಗೆ ದಿ। ಹಾರನಹಳ್ಳಿ ರಾಮಸ್ವಾಮಿ ಲೋಕ ಶಿಕ್ಷಣ ಸೇವಾ ಟ್ರಸ್ಟ್‌ವತಿಯಿಂದ ಸಮಾಜ ಸೇವಾ ಪ್ರಥಮ ಪ್ರಶಸ್ತಿಯ ಗೌರವ ಸಂದಿದೆ.

ಕರ್ನಾಟಕ ನಾಟಕ ಅಕಾಡೆಮಿ, ಬಿಜಾಪುರ ಮಹಿಳಾ ವಿಶ್ವವಿದ್ಯಾಲಯ ಹಾಗೂ ಕರ್ನಾಟಕ ಲೇಖಕಿಯರ ಸಂಘದವರು ನಡೆಸಿದ ಮೊದಲನೇ ಮಹಿಳಾ ರಂಗ ಸಮಾವೇಶದಲ್ಲಿ ಡಾ. ವಿಜಯಾರವರನ್ನು ಮೊದಲ ಗೌರವಾಧ್ಯಕ್ಷೆಯಾಗಿಸುವ ಮೂಲಕ ಗೌರವಿಸಿದ್ದಾರೆ. ಮಾನಸ ಬಳಗ ಡಾ. ವಿಜಯಾರವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತದೆ.

* * *

ಚತುರ್ಭಾಷಾತಾರೆ, ಪದ್ಮಭೂಷಣ ಬಿ. ಸರೋಜದೇವಿಯವರಿಗೆ ಕರ್ನಾಟಕ, ಆಂಧ್ರಗಳಿಂದ ಡಾ. ರಾಜ್‌ಕುಮಾರ್, ಎನ್.ಟಿ. ರಾಮರಾವ್ ಪ್ರಶಸ್ತಿ ಗೌರವ ಸಂದಿದೆ. ಅವರಿಗೆ ಅಭಿನಂದನೆಗಳು.

ಶ್ರೇಷ್ಠ ಬರಹಗಾರ್ತಿ, ಸಹೃದಯಿ ಶೈಲಜಾ ಉಡುಚಣ ಅವರ ನಿಧನವಾರ್ತೆ ಸ್ತ್ರೀಸಮುದಾಯಕ್ಕೆ ಆಘಾತ ಸಂದಿದೆ. ಮಾನಸ ಬಳಗದಿಂದ ಅವರಿಗೆ ಅಶ್ರುತರ್ಪಣವಿರಲಿ.

* * *

ಕಳೆದ ತಿಂಗಳು ಕಾವ್ಯಾನಂದ ಪ್ರಶಸ್ತಿ ಪುರಸ್ಕೃತರನ್ನು ಅಭಿನಂದಿಸಿದ್ದೆವು. ಕಣ್ತಪ್ಪಿನಿಂದ ಹೆಸರು ತಪ್ಪಾಗಿತ್ತು. ಈ ಪ್ರಶಸ್ತಿಯನ್ನು ತಮ್ಮ 'ದಾರಿನೆಂಟ' ಕವಿತಾ ಸಂಕಲನಕ್ಕಾಗಿ ಪಡೆದು ಕೊಂಡಿರುವವರು ನಮ್ಮ ಲೇಖಕ ಬಳಗದವರೇ ಆದ ತುಮಕೂರಿನ ಲಲಿತಾ ಸಿದ್ದಬಸವಯ್ಯ. ●



# ಭೀತಿಯಿಂದ ಬಿಡುಗಡೆ

■ ಆ್ಯಂಗ್ ಸಾನ್ ಸೂಕಿ

*ಮ್ಯಾನ್ಮಾರ್‌ನ ಭರವಸೆಯ ಸಂಕೇತವೆಂದೇ ಕರೆಯಲ್ಪಡುವ ಸೂಕಿ ತನ್ನ ತಂದೆಯ ಗೌರವಾರ್ಥ ಲೇಖನಗಳ ಮಾಲೆಯೊಂದನ್ನು ಪ್ರಕಟಿಸಿದ್ದಾಳೆ, 'Freedom from Fear' ಎಂಬ ಹೆಸರಿನಲ್ಲಿ. ಇಡೀ ಪ್ರಪಂಚವೇ ಅತ್ಯಂತ ಗೌರವದಿಂದ ಪರಿಗಣಿಸುವ ಸೂಕಿ ಮತ್ತು ಆಕೆಯ ಬರಹಗಳು ಬದುಕನ್ನು-ರಾಜಕೀಯವನ್ನೂ ಸತ್ಯದ ಒರೆಗಲ್ಲಿಗೆ ಹಚ್ಚಿ ಶೋಧಿಸುವ ಸಾಮರ್ಥ್ಯವುಳ್ಳವು. 'Freedom from Fear' ಎಂಬ ಶೀರ್ಷಿಕೆಯ ಈ ಲೇಖನ 'ಭೀತಿ'ಯ ಅತಿ ಸೂಕ್ಷ್ಮ ರೀತಿಗಳನ್ನು ಬಯಲಿಗೆಳೆಯುವ ಮೂಲಕ ಆತ್ಮಶೋಧನೆಗೆ ಒಡ್ಡುತ್ತದೆ, ಅನುಭವದ ಮೂಸೆಯಿಂದ ಮೂಡಿಬಂದ ಈ ಚಿಂತನೆಗಳು ಸ್ತ್ರೀವಾದೀ ಚರ್ಚೆಗಳಿಗೆ ಅತ್ಯಮೂಲ್ಯ ಕೊಡುಗೆಯಾಗಬಲ್ಲವು ಎಂಬ ಕಾರಣಕ್ಕಾಗಿ ಇದರ ಅನುವಾದ ಮಾಡಲಾಗಿದೆ.*

*-ವಿ. ಗಾಯತ್ರಿ*

ಭ್ರಷ್ಟಗೊಳಿಸುವುದು ಅಧಿಕಾರವಲ್ಲ, ಭೀತಿ. ಅಧಿಕಾರವನ್ನು ಕಳೆದುಕೊಳ್ಳುವ ಭೀತಿ, ಅದನ್ನು ಹೊಂದಿರುವವರನ್ನು ಭ್ರಷ್ಟಗೊಳಿಸಿದರೆ, ಅದರ ಬಾಧೆಯ ಭೀತಿ ಅದಕ್ಕೊಳಪಟ್ಟವರನ್ನು ಭ್ರಷ್ಟಗೊಳಿಸುತ್ತದೆ. ಬಹುತೇಕ ಬರ್ಮೀಯವರಿಗೆ ನಾಲ್ಕು 'ಅ-ಗತಿ', ಅಂದರೆ ನಾಲ್ಕು ಬಗೆಯ ಭ್ರಷ್ಟತೆಗಳ ಬಗ್ಗೆ ಗೊತ್ತು. 'ಚಾಂದಗತಿ'-ಇದು ಮೋಹದಿಂದ ಉಂಟಾಗುವ ಭ್ರಷ್ಟತೆ. ಲಂಚ ಇಲ್ಲವೇ ತುಂಬಾ ಪ್ರೀತಿಸುವವರ ಮೇಲಿನ ಮೋಹದಿಂದ ಸರಿದಾರಿಯನ್ನು ಬಿಟ್ಟು ನಡೆಯುವುದೇ ಈ ಭ್ರಷ್ಟತೆ. 'ದೋಸಗತಿ' ತಮಗಾಗದವರ ಮೇಲೆ ಹಗೆ ಸಾಧಿಸಲು ತಪ್ಪುದಾರಿ ಹಿಡಿಯುವುದು.' 'ಲೋಗಗತಿ' ಅಭ್ಯಾಸದಿಂದ ದಾರಿ ತಪ್ಪುವುದು. ಕೊನೆಯದಾಗಿ 'ಭಯಗತಿ'-ಭಯವು ಎಲ್ಲ ಬಗೆಯ ವಿವೇಚನೆಯನ್ನು ನಾಶ ಮಾಡುತ್ತದೆ. ಇದು ಇತರ ಮೂರು ಭ್ರಷ್ಟತೆಗಳ ಮೂಲ ಎಂದೇ ಹೇಳಬಹುದು.

'ಚಾಂದಗತಿ'ಯಂತೆ ತನಗಾಗಿ ಪಡೆದುಕೊಳ್ಳುವ ಅಥವಾ ತಾನು ಪ್ರೀತಿಸುವವರ ಸದ್ಭಾವನೆಯನ್ನು ಕಳೆದುಕೊಳ್ಳುವ ಭೀತಿ ಹೇಗೆ ಒಬ್ಬರಲ್ಲಿ ದುರಾಸೆಯನ್ನುಂಟು ಮಾಡುತ್ತದೆಯೋ ಅದೇ ರೀತಿಯಲ್ಲಿ ಘಾಸಿಗೊಳ್ಳುವ, ಅವಮಾನಿತಗೊಳ್ಳುವ ಭೀತಿ ಕೂಡ ದುರ್ಭಾವನೆಗೆ ಪ್ರಚೋದನೆಯನ್ನು ತರಬಲ್ಲುದು. ಮತ್ತು ಭೀತಿಯಿಂದ ಮುಕ್ತವಾದ ಸತ್ಯದ ಬೆನ್ನು ಹತ್ತದ ಹೊರತು ಅಜ್ಞಾನದಿಂದ ಬಿಡಿಸಿಕೊಳ್ಳುವುದು ಸುಲಭವಲ್ಲ, ಭೀತಿ ಮತ್ತು ಭ್ರಷ್ಟತೆಗಳ ನಡುವೆ ಇಷ್ಟೊಂದು ನಿಕಟ ಸಂಬಂಧವಿರುವಾಗ, ಭೀತಿಯಿಂದ ತುಂಬಿದ ಯಾವುದೇ ಸಮಾಜವು ಭ್ರಷ್ಟತೆಯ ಆಗರವಾಗುವುದರಲ್ಲಿ ಆಶ್ಚರ್ಯವೇನಿಲ್ಲ.

1988ರಲ್ಲಿ ವಿದ್ಯಾರ್ಥಿಗಳ ದಂಗೆಯ ಮೂಲಕ ಸ್ಪಷ್ಟ ಪ್ರಕಟನೆ ಪಡೆದ ಬರ್ಮಾದ ಪ್ರಜಾತಂತ್ರ ಚಳವಳಿಗೆ, ದೇಶದಲ್ಲಿನ ಆರ್ಥಿಕ ಮುಗ್ಗಟ್ಟಿನ ಬಗ್ಗೆ ಜನರಲ್ಲಿ ತಲೆದೋರಿದ ಅಸಮಾಧಾನವೇ ಕಾರಣ ಎಂದು ನೋಡಲಾಗಿದೆ. ಬಹು ಕಾಲದಿಂದ ನಡೆದು ಬಂದ ಅಸಂಬದ್ಧ ಪಾಲಿಸಿಗಳು, ಹಣದುಬ್ಬರ, ಆದಾಯದಲ್ಲಿನ ಕಡಿತ ಇತ್ಯಾದಿಗಳು ದೇಶದ ಆರ್ಥಿಕತೆಯನ್ನು ವಿರೂಪಗೊಳಿಸಿದ್ದು ನಿಜ.

ಆದರೆ, 'ಮೂಲತಃ,' ಒಳ್ಳೆಯ ಸ್ವಭಾವದವರೂ, ಶಾಂತಿ ಪ್ರಿಯರೂ ಆದ ಜನರ ತಾಳ್ಮೆಯನ್ನು ನುಚ್ಚು ನೂರು ಮಾಡಿದ ಕಾರ್ಪಣ್ಯಗಳಿಗಿಂತ ಹೆಚ್ಚಾಗಿ ಭ್ರಷ್ಟತೆ ಮತ್ತು ಭೀತಿಯಿಂದ ಕಳಂಕಿತಗೊಂಡ ಬದುಕಿನ



ರೀತಿಯಿಂದುಂಟಾದ ಅಪಮಾನ ಅದಾಗಿತ್ತು. ವಿದ್ಯಾರ್ಥಿಗಳು ಕೇವಲ ತಮ್ಮ ಕಾಮ್ರೇಡ್‌ಗಳ ಸಾವಿನ ವಿರುದ್ಧ ಮಾತ್ರ ಪ್ರತಿಭಟಿಸುತ್ತಿರಲಿಲ್ಲ. ಬದುಕಿನ ಅರ್ಥವಂತಿಕೆಯನ್ನೇ ನಾಶ ಮಾಡುವುದರ ಮೂಲಕ ಜೀವದ ಮೇಲಿನ ಹಕ್ಕನ್ನೇ ವಂಚಿತಗೊಳಿಸಿ ಭವಿಷ್ಯತ್ತನ್ನು ಕರಾಳಗೊಳಿಸಿದ ಆಳ್ವಿಕೆಯ ವಿರುದ್ಧವೂ ಅವರ ಪ್ರತಿಭಟನೆ ಇತ್ತು. ವಿದ್ಯಾರ್ಥಿಗಳ ದಂಗೆ ಜನರ ಅಸಮಾಧಾನಗಳಿಗೆ ಸ್ಪಷ್ಟ ದನಿ ಕೊಟ್ಟಿದ್ದರಿಂದಲೇ ಅದು ಬಹು ಬೇಗ ರಾಷ್ಟ್ರೀಯ ಮಟ್ಟದ ಚಳವಳಿಯಾಗಿ ಬೆಳೆಯಲು ಸಾಧ್ಯವಾದದ್ದು. ಇದರ ಹತ್ತಿರದ ಬೆಂಬಲಿಗರಲ್ಲಿ ಅನೇಕರು ವ್ಯವಸ್ಥೆಯೊಳಗಡೆ ಕೇವಲ ಬದುಕು ಸಾಗಿಸುವುದು ಮಾತ್ರವಲ್ಲ, ಉನ್ನತಿಯನ್ನು ಸಾಧಿಸುತ್ತಾ ಹೋಗುವ ಚಾಲಾಕಿತನವನ್ನು ಹೊಂದಿದ್ದ ಉದ್ದಿಮೆದಾರರು. ಆದರೆ ಅವರ ಸಂಪದ್ಭರಿತ ಸ್ಥಿತಿಯು ಅವರಿಗೆ ನಿಜಾರ್ಥದಲ್ಲಿ ಯಾವ ಭದ್ರತೆಯನ್ನಾಗಲೀ, ತೃಪ್ತಿಯನ್ನಾಗಲೀ ತಂದು ಕೊಡಲಿಲ್ಲ. ಮತ್ತು ಸಹ ಪ್ರಜೆಗಳು, ಅವರು ಯಾವುದೇ ಆರ್ಥಿಕ ಹಿನ್ನಲೆಯನ್ನು ಹೊಂದಿರಲಿ, ಒಂದು ಘನತೆಯ ಬದುಕನ್ನು ಹೊಂದಬೇಕಾದರೆ ಕೊನೇಪಕ್ಷ ಒಂದು ಬದ್ಧ ಆಡಳಿತ ವ್ಯವಸ್ಥೆ ಅವಶ್ಯ ಎಂಬುದನ್ನು ಅವರು ಮನಗಾಣಲು ಸಾಧ್ಯವಾಯಿತು.

ಬರ್ಮಾದ ಜನ ಜಡ ದಬ್ಬಾಳಿಕೆಯಿಂದ ಕ್ಷೋಭೆಗೊಂಡ ಸ್ಥಿತಿಯ ಬಗ್ಗೆ ಸಂಪೂರ್ಣ ದಣಿದಿದ್ದರು. ಅಧಿಕಾರವೆಂಬ ಬೊಗಸೆಯೊಳಗಿನ ನೀರಿನಂತಿದ್ದರು ಅವರು,

**ಬೊಗಸೆಯೊಳಗಿನ ನೀರಿನಂತೆ**
**ಸ್ವಚ್ಛ ತಣ್ಣಗಿರಬಹುದು ನಾವು**
**ಆದರೆ ಅದೇ ಬೊಗಸೆ ನೀರಿನೊಳಗೆ**
**ಗಾಜಿನ ಸಿಬುರುಗಳಂತಿರಬಹುದು ನಾವು**

ಹಿಸುಕಲು ಹವಣಿಸುವ ಕೈಗಳಿಂದ ತಮ್ಮನ್ನು ಕಾಪಾಡಿಕೊಳ್ಳುವ ಅತ್ಯಂತ ಸಣ್ಣ ಆದರೆ ಮೊನಚಿನಿಂದ ಪ್ರಜ್ವಲಿಸುವ ಗಾಜಿನ ಚೂರುಗಳು ದಬ್ಬಾಳಿಕೆಯಿಂದ ಬಿಡುಗಡೆ ಪಡೆಯಲು ಹವಣಿಸುವವರ ದಿಟ್ಟತನದ ಸ್ಪಷ್ಟ ಸಂಕೇತವಾಗಬಹುದು. ಬಾಗ್‌ಯೋಕ್ ಆ್ಯಂಗ್ ಸ್ಯಾನರು ತನ್ನನ್ನು ಒಬ್ಬ ಕ್ರಾಂತಿಕಾರಿ ಎಂದು ಕರೆದುಕೊಂಡರು ಮತ್ತು ತನ್ನನ್ನು ವಿಚಾರಣೆಗೊಳಪಡಿಸಿದ್ದ ಸಂದರ್ಭದಲ್ಲಿ ಬರ್ಮಾವನ್ನು ಅಮರಿಕೊಂಡಿದ್ದ ಸಮಸ್ಯೆಗಳಿಗೆ ಪರಿಹಾರ ಹುಡುಕುವಲ್ಲಿ ನಿರಂತರ ವಾಗಿ ತೊಡಗಿಕೊಂಡಿದ್ದರು. ಆತ ಯಾವಾಗಲೂ ಜನರನ್ನು ತಮ್ಮೊಳಗಡೆ ದಿಟ್ಟತನವನ್ನು ಬೆಳೆಸಿಕೊಳ್ಳಲು ಹುರಿದುಂಬಿಸುತ್ತಿದ್ದರು.

"ಯಾವಾಗಲೂ ಇತರರ ಧೈರ್ಯ ಮತ್ತು ಗುಂಡಿಗೆಗಳನ್ನೇ ಅವಲಂಬಿಸಬೇಡಿ. ನಿಮ್ಮಲ್ಲಿ ಪ್ರತಿಯೊಬ್ಬರೂ ಧೈರ್ಯ, ಗುಂಡಿಗೆ ಗಳನ್ನು ಹೊಂದಿ ನಾಯಕರಾಗಲು ತ್ಯಾಗಗಳನ್ನು ಮಾಡಬೇಕು. ಹೀಗಾದಾಗಲೇ ನಾವೆಲ್ಲರೂ ಒಟ್ಟಿಗೆ ನಿಜ ವಿಮುಕ್ತಿಯನ್ನು ಪಡೆಯಲು ಸಾಧ್ಯ. ಭೀತಿಯು ದಿನನಿತ್ಯ ಬದುಕಿನ ಅವಿಭಾಜ್ಯ ಭಾಗವಾಗಿರುವ ಪರಿಸರದಲ್ಲಿ ಭ್ರಷ್ಟರಾಗದೇ ಉಳಿಯುವ ಪ್ರಯತ್ನ ಅವಶ್ಯಕ ಎಂಬುದು, ಶಾಸನಬದ್ಧ ಆಡಳಿತ ಹೊಂದಿರುವ ದೇಶಗಳಲ್ಲಿರುವಷ್ಟು ಅದೃಷ್ಟವಂತ ರಾದವರಿಗೆ ತಕ್ಷಣದ ಸಮಸ್ಯೆಯಲ್ಲ. ನಿಷ್ಪಕ್ಷಪಾತ ಶಿಕ್ಷೆ ವಿಧಿಸುವ ಮೂಲಕ ಶಾಸನಗಳು ಭ್ರಷ್ಟತೆಯನ್ನು ತಡೆಗಟ್ಟಲು ಸಾಧ್ಯವಾಗುವುದು ಮಾತ್ರವಲ್ಲ, ಜನರು ಭ್ರಷ್ಟ ಆಚರಣೆಗಳಿಗೆ ಒಳಗಾಗದೆ ತಮ್ಮ ಮಾನವ ಸಹಜ ಘನತೆಯನ್ನು ಕಾಪಾಡಿಕೊಳ್ಳಲು ಬೇಕಾದ ಮೂಲಭೂತ ಅವಶ್ಯಕತೆಗಳನ್ನು ಹೊಂದಲೂ ಇದರಿಂದ ಸಹಾಯವಾಗುತ್ತದೆ. ಅಂತಹ ಶಾಸನಗಳು ಇಲ್ಲದಿದ್ದಾಗ ನ್ಯಾಯ ಮತ್ತು ಸಾಮಾನ್ಯ ಘನತೆಯ ನೀತಿಯನ್ನು ಎತ್ತಿಹಿಡಿಯುವ ಹೊರೆಯು ಜನ ಸಾಮಾನ್ಯರ ಮೇಲೆ ಬೀಳುತ್ತದೆ. ಅವರ ಸತತ ಪ್ರಯತ್ನದ ಒಟ್ಟಾದ ಪರಿಣಾಮ ಮತ್ತು ನಿರಂತರವಾಗಿ ಕಾಯ್ದುಕೊಂಡ ಅಂತಃಶಕ್ತಿಗಳು, ಯುಕ್ತಿ ಮತ್ತು ಪ್ರಜ್ಞೆಗಳನ್ನು ಭೀತಿ ಅಮರಿಕೊಂಡಿರುವ ಸ್ಥಿತಿಯನ್ನು ಬದಲಿಸಿ, ಜನ ಬಯಸುವ ಸಾಮರಸ್ಯ ಮತ್ತು ನ್ಯಾಯಗಳಿಗೆ ಕುಮ್ಮಕ್ಕು ಕೊಟ್ಟು, ವಿಚ್ಛಿದ್ರಕಾರಕ ರೀತಿ-ನೀತಿಗಳನ್ನು ನಿಯಂತ್ರಿಸುವ ಶಾಸನಬದ್ಧ ನಿಯಮಗಳು ಇರುವ ಸ್ಥಿತಿಯನ್ನು ತರಲು ಸಾಧ್ಯ.

ಶಕ್ತಿವಂತ ಮತ್ತು ಅನೀತಿವಂತ ಜನ ದುರ್ಬಲ ಮತ್ತು ಅಸಹಾಯಕರ ಮೇಲೆ ಪ್ರಾಬಲ್ಯ ಸಾಧಿಸಲು ಉಪಯೋಗಿಸಲ್ಪಡುವ ಮಾರಕ ಅಸ್ತ್ರಗಳನ್ನು ಸೃಷ್ಟಿಸುತ್ತಿರುವ ತಾಂತ್ರಿಕತೆಯ ಯುಗದಲ್ಲಿ, ರಾಜಕೀಯ ಮತ್ತು ನೀತಿಗಳ ನಡುವೆ ನಿಕಟತೆ ಉಂಟಾಗಬೇಕಾದ ತೀವ್ರ ಅವಶ್ಯಕತೆ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟ ಗಳೆರಡರಲ್ಲೂ ಇದೆ.

ಸಂಯುಕ್ತ ರಾಷ್ಟ್ರಗಳ ಮಾನವ ಹಕ್ಕುಗಳನ್ನು ಕುರಿತ ವಿಶ್ವಾತ್ಮಕ ಘೋಷಣೆಯು, ಪ್ರತಿಯೊಬ್ಬ ಮಾನವರೂ ಯಾವುದೇ ವರ್ಣ, ರಾಷ್ಟ್ರೀಯತೆ ಅಥವಾ ಧರ್ಮದ ಭೇದವಿಲ್ಲದೆ ಹೊಂದಲರ್ಹ ರಾಗಿರುವ ಮೂಲಭೂತ ಹಕ್ಕು ಮತ್ತು ಬಿಡುಗಡೆಗಳನ್ನು ತರಲು ಸಮಾಜದ ಪ್ರತಿಯೊಬ್ಬ ವ್ಯಕ್ತಿ ಮತ್ತು ಅಂಗಗಳು ಸರ್ವದಾ ಪ್ರಯತ್ನಿಸಬೇಕಾಗಿರುವುದನ್ನು ಒತ್ತಿ ಹೇಳುತ್ತದೆ. ಆದರೆ ಜನರ ಆಯ್ಕೆಯ ಬದಲು ದಬ್ಬಾಳಿಕೆಯನ್ನು ಹೊಂದಿರುವ ಸರ್ಕಾರ ಇರುವವರೆಗೂ ಮತ್ತು ದೀರ್ಘಕಾಲಿಕ ಶಾಂತಿ ಮತ್ತು ಸಮೃದ್ಧತೆಗೆ ಬದಲಾಗಿ ಅಲ್ಪಕಾಲಿಕ ಲಾಭಗಳನ್ನು ದೃಷ್ಟಿಯಾಗಿಯುಳ್ಳ ಆಸಕ್ತ ಗುಂಪುಗಳು ಇರುವವರೆಗೂ ಮಾನವ ಹಕ್ಕುಗಳನ್ನು ಪ್ರತಿಪಾದಿಸುವ

ಮತ್ತು ರಕ್ಷಿಸುವ ಒಟ್ಟಾರೆ ಅಂತರರಾಷ್ಟ್ರೀಯ ಕ್ರಿಯೆಗಳು ಎಷ್ಟೇ ಹೆಚ್ಚೆಂದರೂ ಭಾಗಶಃ ಮನ್ನಣೆ ಕಂಡ ಹೋರಾಟಗಳಾಗಿ ಮಾತ್ರ ಉಳಿಯುತ್ತವೆ. ದಬ್ಬಾಳಿಕೆಗೆ ಒಳಗಾದ ಸಂತ್ರಸ್ತರು ಮಾನವ ಕುಲದ ಕುಟುಂಬದ ಸದಸ್ಯರಾಗಿ ತಮ್ಮ ಜನ್ಮಸಿದ್ಧ ಹಕ್ಕುಗಳನ್ನು ಸಮರ್ಥಿಸಿಕೊಳ್ಳಲು ತಮ್ಮೊಳಗಿನ ಸಂಪನ್ಮೂಲಗಳನ್ನು ಅವಾಹನೆ ಮಾಡಿಕೊಳ್ಳುವ ರೀತಿಯ ಹೋರಾಟದ ವಿವಿಧ ಸ್ವರೂಪಗಳು, ಹಕ್ಕುಗಳು ಮುಂದುವರೆಯುತ್ತಲೇ ಹೋಗುತ್ತವೆ.

ಒಂದು ಶುದ್ಧವಾದ ಕ್ರಾಂತಿಯು, ದೇಶದ ಅಭಿವೃದ್ಧಿಯ ಸ್ವರೂಪವನ್ನು ಬದಲಾಯಿಸಬಲ್ಲ ಮಾನಸಿಕ ದೃಷ್ಟಿಕೋನ ಮತ್ತು ಮೌಲ್ಯಗಳಲ್ಲಿನ ಬದಲಾವಣೆಯ ಅವಶ್ಯಕತೆಯನ್ನು ಮನಗಂಡ ಬೌದ್ಧಿಕ ದೃಢ ನಿಶ್ಚಯದಿಂದ ಹುಟ್ಟಿದ ಚೇತನವಾಗಿರುತ್ತದೆ.

ಕೇವಲ ವಸ್ತು ಸಂಬಂಧೀ ಸ್ಥಿತಿಗತಿಗಳಲ್ಲಿನ ಸುಧಾರಣೆಗಾಗಿಯೇ ಅಧಿಕೃತ ಪಾಲಿಸಿ ಮತ್ತು ಸಂಸ್ಥೆಗಳಲ್ಲಿ ಬದಲಾವಣೆಯನ್ನು ತರಬೇಕೆನ್ನುವುದನ್ನೇ ಗುರಿಯಾಗಿಟ್ಟುಕೊಂಡ ನಿರ್ಣಯಕ್ಕೆ ನಿಜವಾದ ಯಶಸ್ಸಿನ ಸಾಧ್ಯತೆಗಳಿರುವುದು ತುಂಬಾ ಕಮ್ಮಿ. ಅಂತಃಕಾರಣಿಕ ಕ್ರಾಂತಿಯಾಗಿದ್ದಲ್ಲದೆ, ಹಳೆಯ ಮಾದರಿಯ ದುಷ್ಕೃತ್ಯಗಳನ್ನು ಹುಟ್ಟುಹಾಕಿರುವ ಶಕ್ತಿಗಳು ಚಲನೆಯಲ್ಲಿರುತ್ತಲೇ ಹೋಗುತ್ತಾ ಸುಧಾರಣೆ ಮತ್ತು ಪುನರ್ ಸೃಷ್ಟಿಯ ಪ್ರಕ್ರಿಯೆಗೆ ನಿರಂತರ ಬೆದರಿಕೆಯನ್ನು ಒಡ್ಡುತ್ತಲೇ ಹೋಗುತ್ತವೆ. ಕೇವಲ ಪ್ರಜಾತಂತ್ರ ವಿಮುಕ್ತಿ ಮತ್ತು ಮಾನವ ಹಕ್ಕುಗಳಿಗಾಗಿ ಕರೆ ನೀಡಿದರೆ ಮಾತ್ರ ಸಾಲದು, ಹೋರಾಟವನ್ನು ಉಳಿಸಿಕೊಂಡು ಹೋಗುವ ಒಟ್ಟಾದ ದೃಢಸಂಕಲ್ಪ, ಸತ್ಯಾನ್ವೇಷಣೆಯಲ್ಲಿ ತ್ಯಾಗಗಳನ್ನು ಮಾಡುವುದು ಅತ್ಯಾಶೆ, ಕುಟಿಲತೆ, ಅಜ್ಞಾನ ಮತ್ತು ಭೀತಿಗಳನ್ನು ಹುಟ್ಟು ಹಾಕಬಲ್ಲ ಭ್ರಷ್ಟಾತ್ಮಕ ಪ್ರಭಾವಗಳನ್ನು ಮೆಟ್ಟಿ ನಿಲ್ಲುವುದೂ ಮುಖ್ಯವಾಗುತ್ತದೆ.

ಪ್ರಯತ್ನವನ್ನು ಮುಂದುವರೆಸುತ್ತಲೇ ಹೋಗುವ ಸಂತರನ್ನು ಪಾಪಾತ್ಮರು ಎಂದು ಹೇಳಲಾಗಿದೆ. ಆದ್ದರಿಂದ ಪ್ರಯತ್ನಿಸುತ್ತಲೇ ಹೋಗುವ, ಆ ಪ್ರಕ್ರಿಯೆಯಲ್ಲಿ ಜವಾಬ್ದಾರಿಗಳನ್ನು ಹೊತ್ತುಕೊಳ್ಳಲು ಮತ್ತು ಮುಕ್ತ ಸಮಾಜವನ್ನು ಕಾಪಾಡಿಕೊಂಡು ಹೋಗುವ ನೀತಿ–ನಿಷ್ಠೆಗಳನ್ನು ಎತ್ತಿ ಹಿಡಿಯಲು ತಮ್ಮನ್ನು ಶಕ್ತರನ್ನಾಗಿಸಿಕೊಳ್ಳುವ ಮುಕ್ತ ಜೀವಿಗಳನ್ನು ದಮನಿಸಲಾಗಿದೆ. ತಮ್ಮ ತುಂಬು ಬದುಕಿಗೆ ಮಾನವರು ಆಶಿಸುವ ಮೂಲಭೂತ ವಿಮುಕ್ತಿಗಳಲ್ಲಿ ಭೀತಿಯಿಂದ ಹೊಂದುವ ವಿಮುಕ್ತಿಯು ಸಾಧನ ಮತ್ತು ಕೊನೆ ಎರಡೂ ಆಗುತ್ತದೆ. ರಾಜ್ಯಾಂಗದ ಅಧಿಕಾರ ಮತ್ತು ದಬ್ಬಾಳಿಕೆಗಳ ವಿರುದ್ಧದ ಶಕ್ತಿಯುತ, ಪ್ರಜಾ ತಾಂತ್ರಿಕ ಸಂಸ್ಥೆಗಳನ್ನು ಕಟ್ಟ ಬಯಸುವ ಜನರು ಮೊಟ್ಟ ಮೊದಲಿಗೆ ತಮ್ಮ ಮನಸ್ಸುಗಳನ್ನು ಭೀತಿ ಮತ್ತು ಔದಾಸೀನ್ಯಗಳಿಂದ ವಿಮುಕ್ತಿಗೊಳಿಸುವುದನ್ನು ಕಲಿಯಬೇಕು.

ತಾನು ಭೋಧಿಸಿದ್ದನ್ನೇ ಬದುಕಿನಲ್ಲಿ ಅಳವಡಿಸಿಕೊಂಡಿದ್ದ ಆ್ಯಂಗ್‌ಸ್ಯಾನ್, ಯಾವತ್ತೂ ತಮ್ಮ ಧೈರ್ಯವನ್ನು ಮೆರೆದವರು. ಈ ಧೈರ್ಯ ಕೇವಲ ಭೌತಿಕ ಸ್ವರೂಪದ್ದಲ್ಲ. ಸತ್ಯವನ್ನು ಮಾತನಾಡುವ, ಹೇಳಿದಂತೆ ನಡೆಯುವ, ಟೀಕೆಗಳನ್ನು ಸ್ವೀಕರಿಸುವ, ತತ್ವಗಳನ್ನು ಒಪ್ಪಿಕೊಂಡು ಸರಿಪಡಿಸಿಕೊಳ್ಳುವ, ಎದುರಾಳಿಗಳನ್ನು ಗೌರವಿಸುವ, ಶತ್ರುಗಳೊಂದಿಗೆ ಚರ್ಚಿಸುವ ಮತ್ತು ತನ್ನ ನಾಯಕತ್ವದ ಒಳಿತು–ಕೆಡುಕುಗಳ ತೀರ್ಮಾನವನ್ನು ಜನರಿಗೇ ಬಿಡುವ ಧೈರ್ಯ ಅದು. ಆತನ ಇಂತಹ ನೈತಿಕ ಧೈರ್ಯವನ್ನೇ ಬರ್ಮ ಯಾವಾಗಲೂ ಪ್ರೀತಿಸುವುದು ಮತ್ತು ಗೌರವಿಸುವುದು. ಈ ಕೀರ್ತಿ–ಗೌರವಗಳು ಕೇವಲ ಯೋಧನಾಗಿ ಮಾತ್ರವಲ್ಲ ದೇಶದ ಸ್ಫೂರ್ತಿ ಮತ್ತು ಪ್ರಜೆಯಾಗಿ. ಮಹಾತ್ಮ ಗಾಂಧಿಯವರನ್ನು ಜವಾಹರಲಾಲ ನೆಹರೂರವರು ವರ್ಣಿಸಿದ ಈ ರೀತಿ ಆ್ಯಂಗ್‌ಸ್ಯಾನ್‌ರಿಗೆ ತುಂಬಾ ಒಪ್ಪುತ್ತದೆ, "ಆತನ ಬೋಧನೆಯ ಸಾರವೇ ನಿರ್ಭೀತಿ ಮತ್ತು ಸತ್ಯವಾಗಿದ್ದು ಜನರ ಕಲ್ಯಾಣವನ್ನು ಯಾವಾಗಲೂ ಮನಸ್ಸಿನಲ್ಲಿಟ್ಟು ಕೊಂಡೇ ಇರುವ ಆತನ ಕ್ರಿಯೆಗಳು ಇವುಗಳಿಂದಲೇ ಕಡೆಯಲ್ಪಟ್ಟವು."



ಅಹಿಂಸೆಯ ಅತಿ ಶ್ರೇಷ್ಠ ದ್ರಷ್ಟಾರನಾದ ಗಾಂಧಿ ಮತ್ತು ನ್ಯಾಷನಲ್ ಆರ್ಮಿಯ ಸ್ಥಾಪಕನಾದ ಆ್ಯಂಗ್ ಸ್ಯಾನ್ ಇಬ್ಬರೂ ಸಂಪೂರ್ಣ ಭಿನ್ನ ವ್ಯಕ್ತಿತ್ವಗಳಾಗಿದ್ದರು. ಆದರೆ ಯಾವುದೇ ಸಂದರ್ಭದಲ್ಲಿ ಯಾವುದೇ ಸ್ಥಳದಲ್ಲಿ ಪ್ರಭುತ್ವದ ಸ್ವರೂಪ ಮತ್ತು ಸವಾಲುಗಳು ಅನಿವಾರ್ಯವಾಗಿ ಒಂದೇ ಆಗಿರುವುದರಿಂದ, ಸವಾಲನ್ನು ಎದುರಿಸಲು ಎದ್ದು ನಿಲ್ಲುವವರ ಸ್ವಾಭಾವಿಕ ಗುಣಗಳು ಒಂದೇ ಆಗಿರುತ್ತವೆ. ಭಾರತದ ಜನರಲ್ಲಿ ದಿಟ್ಟತನವನ್ನು ತುಂಬಿದ್ದು ಗಾಂಧಿಯ ಅತಿ ದೊಡ್ಡ ಸಾಧನೆಗಳಲ್ಲಿ ಒಂದೆಂದು ಪರಿಗಣಿಸುವ ನೆಹರೂ ಒಬ್ಬ ರಾಜಕೀಯ ಆಧುನಿಕರಾಗಿದ್ದರು. ಆದರೆ ಆತ ಇಪ್ಪತ್ತನೇ ಶತಮಾನದ ಸ್ವಾತಂತ್ರ್ಯ ಚಳವಳಿಯನ್ನು ವಿಶ್ಲೇಷಿಸುವಾಗ, ಪ್ರಾಚೀನ ಭಾರತದ ತತ್ವಗಳೆಡೆಗೆ ದೃಷ್ಟಿ ಹಾಯಿಸಿದ್ದರು. "ಒಂದು ದೇಶ ಅಥವಾ ವ್ಯಕ್ತಿಗೆ ಇರುವ ಅತಿ ದೊಡ್ಡ ಕೊಡುಗೆಯೆಂದರೆ ಅಭಯ. ಇದು ಕೇವಲ ಭೌತಿಕತೆಗೆ ಸಂಬಂಧಿಸಿದ ಅಭಯವಲ್ಲ. ಇದು ನಿರ್ಭೀತಿಯ ಮನಸ್ಥಿತಿ."

ನಿರ್ಭೀತಿಯು ಒಂದು ಕೊಡುಗೆಯಿರಬಹುದು, ಆದರೆ ಇದಕ್ಕಿಂತ ಮುಖ್ಯವಾದುದೆಂದರೆ ನಿರಂತರ ಪ್ರಯತ್ನದಿಂದ ಪಡಕೊಂಡ ಧೈರ್ಯ–ನಮ್ಮ ಕ್ರಿಯೆಗಳನ್ನು ಭೀತಿ ನಿಯಂತ್ರಿಸಲು ಬಿಡದೇ ಇರುವುದು. ಒತ್ತಡದ ಸನ್ನಿವೇಶದಲ್ಲಿ ಇರುವ ಗಾಂಭೀರ್ಯ ಎಂದು ವರ್ಣಿಸಬಹುದಾದ ಧೈರ್ಯ. ನಿರಂತರ ತೀವ್ರ ಒತ್ತಡಕ್ಕೆ ಪ್ರತಿಯಾಗಿ ಅರಳುತ್ತಲೇ ಹೋಗುವ ಗಾಂಭೀರ್ಯ/ಮನೋಹರತೆ.

ಮೂಲಭೂತ ಮಾನವ ಹಕ್ಕುಗಳನ್ನು ವಂಚಿತಗೊಳಿಸುವ ವ್ಯವಸ್ಥೆಯೊಳಗೆ, ಭೀತಿಯು ದಿನನಿತ್ಯ ಬದುಕಿನ ರೀತಿಯಾಗಿರುತ್ತದೆ. ಜೈಲು ಬಂಧಿಗಳಾಗುವ ಭಯ, ಹಿಂಸೆಗೊಳಪಡುವ ಭಯ, ಸಾವಿನ ಭಯ. ಸ್ನೇಹಿತರನ್ನು, ಕುಟುಂಬವನ್ನು, ಆಸ್ತಿ ಇಲ್ಲವೇ ಬದುಕಿನ ಸಾಧನೆಗಳನ್ನು ಕಳಕೊಳ್ಳುವ ಭಯ, ಬಡತನದ ಭಯ, ಪರಕೀಯಗೊಳ್ಳುವ ಭಯ, ಸೋಲಿನ ಭಯ. ಅಗೋಚರವಾಗಿದ್ದುಕೊಂಡು ಅತ್ಯಂತ ಅಪಾಯಕಾರಿಯಾಗಿರುವ ಭೀತಿಯ ಸ್ವರೂಪವೆಂದರೆ, ಅದು ಸಾಮಾನ್ಯ ತಿಳಿವಳಿಕೆ, ಇನ್ನೂ ಮುಂದುವರೆದು ವಿವೇಕದ ಮುಸುಕು ಹಾಕಿಕೊಂಡು ಬರುವುದು. ಇದು ಜನರ ಆತ್ಮಗೌರವ ಮತ್ತು ಘನತೆಗಳನ್ನು ಕಾಪಾಡಿಕೊಳ್ಳಲು ಸಾಧ್ಯವಾಗುವ ದಿನನಿತ್ಯದ ಕೆಲವು ಧೈರ್ಯವಂತ ಕ್ರಿಯೆಗಳನ್ನು ನಿರರ್ಥಕವಾಗಿಸಿ



ಬಿಡುತ್ತದೆ. ಭೀತಿಯ ಸೋಂಕು ಹಿಡಿದು ಹೋದ ಜನರಿಗೆ ಅದರಿಂದ ಬಿಡಿಸಿಕೊಳ್ಳುವುದು ಅಷ್ಟು ಸುಲಭವಲ್ಲ. ಆದರೂ, ತೀವ್ರ ದಮನಕಾರಿಯಾದ ಪ್ರಭುತ್ವದಡಿಯಲ್ಲಿಯೇ ದಿಟ್ಟತನವು ಪದೇ ಪದೇ ತಲೆ ಎತ್ತುತ್ತದೆ. ಏಕೆಂದರೆ ಭೀತಿಯು ನಾಗರೀಕ ಮಾನವರ ಸಹಜ ಸ್ಥಿತಿ ಅಲ್ಲವೇ ಅಲ್ಲ.

ಲಂಗು ಲಗಾಮಿಲ್ಲದ ಅಧಿಕಾರದ ಎದುರು ಹುಟ್ಟಿ ಬರುವ ದಿಟ್ಟತನವು ನೀತಿ–ನೇಮಗಳ ಘನತೆಯ ಬಗ್ಗೆ ಇರುವ ದೃಢ ನಂಬಿಕೆಯೇ ಆಗಿದೆ. ಚರಿತ್ರೆಯ ಸತ್ಯದೊಂದಿಗೆ ಬೆಸಕೊಂಡ ಇದು ಎಲ್ಲ ಅಡೆತಡೆಗಳ ನಡುವೆಯೂ ಮಾನವರನ್ನು ಆಧ್ಯಾತ್ಮಿಕ ಮತ್ತು ವಸ್ತು ಸಂಬಂಧೀ ಉನ್ನತಿಯೆಡೆಗೆ ಕರೆದೊಯ್ಯುತ್ತದೆ. ಮಾನವರ ಈ ಸ್ವಯಂ ಸುಧಾರಣೆ ಮತ್ತು ಸ್ವಯಂ ವಿಮೋಚನೆಯ ಸಾಮರ್ಥ್ಯವೇ ಅವರನ್ನು ಪಶುಗಳಿಗಿಂತ ಭಿನ್ನರಾಗಿಸುವುದು. ಅಖಂಡತೆಯ ಕಲ್ಪನೆ, ಅದನ್ನು ಸಾಧಿಸುವ ಛಲ, ಅದರೆಡೆಗೆ ಹಾದಿ ಹುಡುಕಿಕೊಳ್ಳುವ ಬುದ್ದಿವಂತಿಕೆ ಮತ್ತು ಆ ಹಾದಿಯಲ್ಲಿ ನಡೆಯುವ ಸಂಕಲ್ಪ–ಕೊನೆಯವರೆಗೆ ಅಲ್ಲದೇ ಹೋದರೂ ಕೊನೇಪಕ್ಷ ವ್ಯಕ್ತಿಗತ ಮಿತಿಗಳಿಂದ ಮತ್ತು ಸುತ್ತಲಿನ ಅಡ್ಡಿ ಆತಂಕಗಳಿಂದ ಮೇಲೇರುವ ಸಂಕಲ್ಪ ಇವೆಲ್ಲಾ ಮಾನವ ಜವಾಬ್ದಾರಿಯ ಮೂಲದಲ್ಲಿಯೇ ಇವೆ. ವೈಚಾರಿಕ, ನಾಗರೀಕ ಮಾನವತೆಯನ್ನು ಹೊಂದಿರುವ ವಿಶ್ವ, ಮಾನವರ ದೃಷ್ಟಿ–ಕನಸುಗಳಾಗಿವೆ. ಇದೇ ದೃಷ್ಟಿ ಕನಸುಗಳೇ ಅವರನ್ನು ಭೀತಿ, ಲೋಭಗಳಿಂದ ಮುಕ್ತವಾದ ಸಮಾಜಗಳನ್ನು ಕಟ್ಟುವ ಕೆಲಸಕ್ಕೆ ಕೈಹಾಕುವ ಧೈರ್ಯವನ್ನು ತುಂಬುವುದು. ಸತ್ಯ, ನ್ಯಾಯ ಮತ್ತು ದಯೆ–ಕರುಣೆ ಇತ್ಯಾದಿ ಪರಿಕಲ್ಪನೆಗಳೇ ಕ್ರೂರ ಅಧಿಕಾರದ ವಿರುದ್ಧ ನಿಲ್ಲಬಲ್ಲ ರಕ್ಷಕ ಶಕ್ತಿಗಳಾಗಿರುವಾಗ ಇವುಗಳನ್ನು ಕ್ಲೀಷೆಯೆಂದು ತಳ್ಳಿಹಾಕಲು ಸಾಧ್ಯವೇ ಇಲ್ಲ.

*[ಈ ಲೇಖನವನ್ನು ಜೂನ್ 1993ರ 'ಮಾನಸ' ಪತ್ರಿಕೆಯಲ್ಲಿ ಪ್ರಕಟಿಸಲಾಗಿತ್ತು. ಇಪ್ಪತ್ತು ವರ್ಷಗಳ ನಂತರ ಬಿಡುಗಡೆಯಾದ ಆ್ಯಂಗ್‌ಸಾನ್ ಸೂಕಿಯ ಗೌರವಾರ್ಥವಾಗಿ ಮರುಮುದ್ರಿಸುತ್ತಿದ್ದೇವೆ].*

*(ಸ.ಮ.)*

# "ಕವಿತೆ"

ಅವ್ವನ ಕಣ್ಣೀರು
ಕಡೆದ ಬದುಕು
ಆ ಮಡಿಲ ಸಿರಿಯಾಗಿ
ಕಣ್ಣೀರ ಮರಿಯಾಗಿ
ಹರಿದೆ ಹಾಡಿದೆ ನಲಿದೆ
ಬೀಗಿದೆ ಜಿಗಿದೆ ಬೆಳೆದೆ
ತಿಂದುಂಡು ಉಬ್ಬಿದ ಹಕ್ಕಿಯಾಗಿ
ಹಾರಾಡಿದೆ ಕೊಂಬೆ ಕೊಂಬೆಗು
ಕುಳಿತು ಆಲಾಪಿಸಿದೆ
ಹಾಡ ಆರಾಧಿಸಿದೆ
ಅಲ್ಲಾಗ ಪ್ರೀತಿಯ ಕೈಗಳು
ಮೈದಡವಿ ಮುದ್ದಿಸಿದವು
ನೆತ್ತಿ ಚುಂಬಿಸಿ
ಬೆಳಕಿನ ಸೆಳೆಕಿಗೆ ಸೆಳೆದವು
ಅದೊಂದು ಆಶುಕವಿತೆ
ಬೆಳಕಿನಾ ಸೆಳಕು
ಮಿಂಚಿ ಹರಿದು
ನೆರಮನೆಯ ಸಿರಿದೇವಿಯಾಗಿ
ಪರಂಪರೆಯ ಮಿಣುಕಾಟ
ತಿಣುಕಾಟ ಇನ್ನೇನು ಭಾವಗಳು
ಬತ್ತಿ ಬಯಲಾಗುವ ಹೊತ್ತು
ನಡುವೆಯೆ ತುಂತುರು ಮಳೆ
ತಡವಿಲ್ಲದೆಯೆ ಬಿತ್ತಿದ
ಒಡಲ ಮಣ್ಣೊಳಗೆ
ಆಚೀಚೆ ಹರಿದಾಡಿ
ಮುಲುಕಿಗೂ ನೋವಿಗೂ
ನಡುವಿನ ಹೆರಿಗೆ ವೈಭವವ
ಕರಗಿಸಿ ಇಗೋ ಬಂದೇ ಎನುತ
ಇಳಿದಿತ್ತು ಕವಿತೆ
ಹುಟ್ಟು ಸಾವು ಬೆರಗಾಗುವಂತೆ

■ **ಸುಶೀಲಾ ಸೋಮಶೇಖರ್**
*ಹಾಸನ*





# ನಾಜಿ ವಿರೋಧಿ ನೂರಿಗೆ ನಮನ

■ ಡಾ. ಕೆ. ಷರೀಫಾ

ಯಾರು ಈಕೆ? ಇವಳ ಹೆಸರು 'ನೂರ್ ಇನಾಯತ್ ಖಾನ್.' ಹಿಟ್ಲರ್‌ಶಾಹಿ, ನಾಝಿ ವಿರೋಧಿ ಹೋರಾಟಗಾರ್ತಿ. ನೂರ್ (ಬೆಳಕು–ಪ್ರಭೆ) ಭಾರತೀಯ ಅದರಲ್ಲೂ ಕರ್ನಾಟಕದ ಸಂತಾನವಾಗಿದ್ದಳು. ಅವಳು ಬೇರೆ ಯಾರೂ ಅಲ್ಲ. ಭಾರತದ ಸ್ವಾತಂತ್ರ್ಯ ಕಸಿದುಕೊಂಡಿದ್ದ ಬ್ರಿಟಿಷರ ಎದೆಯಲ್ಲಿ ನಡುಕ ಹುಟ್ಟಿಸಿದ್ದ ಮೈಸೂರಿನ ಹುಲಿ ಟಿಪ್ಪು ಸುಲ್ತಾನರ ಮರಿಮೊಮ್ಮಗಳು.

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಮೊಟ್ಟಮೊದಲ ಬಾರಿಗೆ ಕರ್ನಾಟಕದ ಇತಿಹಾಸದಲ್ಲಿ ಬ್ರಿಟಿಷರನ್ನು ದಿಟ್ಟತನದಿಂದ ಎದುರಿಸಿದ ಕಲಿ ಟಿಪ್ಪು ಸುಲ್ತಾನರ ಮನೆತನದ ಕುಡಿ **ನೂರ್**‌ಳ ರಕ್ತದಲ್ಲಿಯೂ ಸಾಮ್ರಾಜ್ಯಶಾಹಿ ವಿರೋಧಿ ರಕ್ತ ಹರಿಯುತ್ತಿತ್ತು. ಹಿಟ್ಲರ್‌ಶಾಹಿಯ ಹಿಂಸೆಗಳ ವಿರುದ್ಧ ಅಪ್ರತಿಮ ಸಾಹಸದಿಂದ ಹೋರಾಡಿದ ನೂರಿ ಅಥವಾ ನೂರ್ ಉನ್ನೀಸಾ–ತಾನು ಭಾರತೀಯಳಲ್ಲವೆಂದು ಹೇಳಿದ್ದರೂ ಸಾಕಿತ್ತು ಅವಳ ಜೀವ ಉಳಿಯುತ್ತಿತ್ತು. ಆದರೆ ಅವಳು ಹಾಗೆ ಮಾಡಲಿಲ್ಲ.

ಭಾರತದಲ್ಲಿ ಚಾಂಧ್‌ಬೀಬಿ, ರಜ಼ಿಯಾ ಸುಲ್ತಾನಾ ಮುಂತಾದ ವೀರ ಮುಸ್ಲಿಂ ಮಹಿಳೆಯರು ರಾಜ್ಯಭಾರ ಮಾಡಿದ್ದಾರೆ. ಆದರೆ **ನೂರ್** ಭಾರತೀಯಳಾಗಿದ್ದರೂ ಅವಳು ಇಡೀ ವಿಶ್ವದ ಆಸ್ತಿಯಾಗಿದ್ದಳು. 1944ರ ಸೆಪ್ಟೆಂಬರ್ 12ರಂದು ಭಯಂಕರ ಡಚ್ ಕಾನ್‌ಸೆಂಟ್ರೇಶನ್ ಕ್ಯಾಂಪ್‌ನಲ್ಲಿ ಅವಳನ್ನು ಗುಂಡಿಟ್ಟು ಕ್ರೂರವಾಗಿ–ಹತ್ಯೆಗೈಯಲಾಯಿತು. 2ನೇ ವಿಶ್ವಯುದ್ಧದ ನಂತರ ಅವಳಿಗೆ ವಿಶ್ವದ ಅತ್ಯುನ್ನತ ಪ್ರಶಸ್ತಿಗಳು ಲಭಿಸಿದವು.

ನೂರ್‌ಳಿಗೆ ವಿಶ್ವವನ್ನೇ ಒಂದಾಗಿ ನೋಡುವ ಅದಮ್ಯ ಶಕ್ತಿಯಿತ್ತು. ಅದಮ್ಯ ಚೇತನ, ಸ್ಮರಣೀಯ ಕೆಲಸ, ಶೌರ್ಯ ಸಾಹಸದ ಕಾರ್ಯಗಳಿಂದಾಗಿ 'ನೂರ್' ಚರಿತ್ರೆಯಲ್ಲಿ ವಿಶಿಷ್ಟ ಶಕ್ತಿಯಾಗಿ ಕಾಣುತ್ತಾಳೆ. **ನೂರ್** ಎಂದರೆ "ಸ್ತ್ರೀತ್ವದ ಬೆಳಕು." ಈ ವಿಶಿಷ್ಟ ಶಕ್ತಿಗೆ ಬ್ರಿಟನ್‌ನ ಉನ್ನತ ಪ್ರಶಸ್ತಿ "ಜಾರ್ಜ್ ಕ್ರಾಸ್" ಹಾಗೂ ಫ್ರಾನ್ಸಿನ ಉನ್ನತ ಗೌರವವಾದ "ಗೋಲ್ಡ್‌ಸ್ಟಾರ್" ಪ್ರಶಸ್ತಿಗಳು ದೊರೆತವು.

**ನೂರ್‌ಳ ತಂದೆ ತಾಯಿ**

ಟಿಪ್ಪು ಸುಲ್ತಾನರ ಮೊಮ್ಮಗ ಹಜ್ರತ್ ಇನಾಯತ್ ಖಾನ್. ಇವರು ನೂರ್‌ಳ ತಂದೆ. ಅಮೆರಿಕನ್ ತಾಯಿ ನೊರಾರೇ ಬೇಕರ್ ಅಮೆರಿಕೆಯಲ್ಲಿದ್ದಾಗ ನೋರಾ ಬೇಕರ್‌ರವರನ್ನು ಪ್ರೀತಿಸಿ ವಿವಾಹವಾದರು. ಫ್ರಾನ್ಸ್‌ನಲ್ಲಿ ಅವರು ವಿವಾಹವಾದರು. ಪಶ್ಚಿಮದ ರಾಷ್ಟ್ರಗಳಲ್ಲಿ "ಸೂಫಿ ಸಿದ್ಧಾಂತ"ದ ಪ್ರಚಾರಕ್ಕಾಗಿ ಇನಾಯತ್ ಖಾನ್‌ರು ಹೋಗಿದ್ದರು. ಸೂಫಿ ಸಿದ್ಧಾಂತದ ಉದಾರ ಗುಣಗಳು ಅವರನ್ನು ಆಕರ್ಷಿಸಿದ್ದವು. "ಸೂಫಿ ಸಿದ್ಧಾಂತ ಹೃದಯದ ಸಿದ್ಧಾಂತ" ಎನ್ನುತ್ತಿದ್ದರು. "ಜಾತೀಯ ಅಡ್ಡಗೋಡೆಗಳನ್ನೊಡೆದ ಹೃದಯದ ಮಾತೇ ಸೂಫೀತನ"ವೆನ್ನುತ್ತಿದ್ದರು. ಅನೇಕ ಧರ್ಮಗಳನ್ನು ತಮ್ಮ ವಿಶ್ವಾಸದ ತೆಕ್ಕೆಗೆ ತೆಗೆದುಕೊಳ್ಳುತ್ತಾ ಅವರು ಸಂಯುಕ್ತ ಸಂಸ್ಥಾನದ ಅನೇಕ ಕಡೆ "ಸೂಫೀಯಿಸಂ"ಗಾಗಿ ಪ್ರವಾಸ ಕೈಕೊಂಡರು. ಆ ಸಮಯದಲ್ಲಿ ಹೆನ್ರಿ ಫೋರ್ಡ್‌ರವರು ಇವರ ಸ್ನೇಹಿತರಾಗಿ ಇವರ ಪ್ರವಾಸಕ್ಕೆ ತಮ್ಮ ಕೊಡುಗೆಯಾಗಿ ಒಂದು ಕಾರನ್ನು ನೀಡಿದ್ದರು. ನೊರಾರೇ ಬೇಕರ್‌ರನ್ನು ವಿವಾಹವಾಗಿ ಖಾನ್‌ರು–4 ಮಕ್ಕಳನ್ನು ಪಡೆದರು. ಅವರಲ್ಲಿ ಇನ್ನೂ ಇಬ್ಬರು ಮಕ್ಕಳು ಇಂದಿಗೂ ನಮ್ಮ ಮಧ್ಯೆ ಜೀವಿಸಿದ್ದಾರೆ. ಹಿರಿಯ ಮಗಳೇ **ನೂರ್**, ಜನವರಿ ಒಂದು 1914ರಲ್ಲಿ ರಷ್ಯದ ಕ್ರೆಮ್ಲಿನ್‌ನಲ್ಲಿ ಜನಿಸಿದಳು. ಜೂನ್ 19, 1916ರಲ್ಲಿ ಮೊದಲ ಮಗ ವಿಲಾಯತ್

ಇನಾಯತ್ ಖಾನ್ ಇಂಗ್ಲೆಂಡಿನಲ್ಲಿ ಜನಿಸಿದರು. ಅನಂತರ ಇನ್ನೊಬ್ಬ ತಮ್ಮ ಹಿದಾಯತ್ ಮತ್ತು ತಂಗಿ ಖೈರುನ್ನೀಸಾ (ಕ್ಲೇರ್) ಹುಟ್ಟಿದರು. ಆದರೂ ತಂದೆಗೆ ನೂರ್‌ಳ ಮೇಲೆ ಅಪಾರ ಪ್ರೀತಿಯಿತ್ತು. ತಂದೆಯ ಮಗಳೆಂದು ಹೇಳುತ್ತಿದ್ದ ಅವಳನ್ನು "ಬಾಬುಲಿ" ಎಂದು ಕರೆಯುತ್ತಿದ್ದರು.

ವಿಶ್ವಸಾಹಿತಿ ಲಿಯೋಟಾಲ್‌ಸ್ಟಾಯ್‌ರವರ ಆಹ್ವಾನದ ಮೇರೆಗೆ ಇನಾಯತ್ ಖಾನ್ ಮತ್ತು ತಾಯಿ ನೊರಾ ಬೇಕರ್ ಮಾಸ್ಕೊಗೆ ಹೋಗಿದ್ದಾಗ 'ನೂರ್'ಳ ಜನ್ಮವಾಯಿತು. ಆಗ ರಷ್ಯದ ಕ್ರಾಂತಿ ಹಾಗೂ 1ನೇ ಮಹಾಯುದ್ಧದ ದಿನಗಳಾಗಿದ್ದರಿಂದ ಅಲ್ಲಿಂದ ಹೊರಟು ಇಂಗ್ಲೆಂಡ್‌ಗೆ ಬಂದು ನೆಲೆಸಿದರು. ಅಲ್ಲಿಂದ ಪ್ಯಾರಿಸ್ಸಿಗೆ 1920ರಲ್ಲಿ ಹೋಗಿ "ಫಾಜಲ್ ಮಂಜಿಲ್"ನಲ್ಲಿ ವಾಸಿಸಿದರು. ಈ ಮನೆಯನ್ನು ಸೂಫೀ ಅನುಯಾಯಿಯಾದ ಡಚ್ ವಿಧವೆ ಮೇಡಂ ಎಂಜಿಲಿಂಗ್ ಇವರಿಗೆ ನೀಡಿದ್ದರು.

1927ನೇ ಫೆಬ್ರವರಿಯಲ್ಲಿ ಹಜ್ರತ್ ಇನಾಯತ್ ಖಾನರು–ತಮ್ಮ 44ನೇ ವಯಸ್ಸಿನಲ್ಲಿ ಭಾರತದ ಪ್ರವಾಸದಲ್ಲಿದ್ದಾಗ–ನಿಧನರಾದರು. ಅವರು ನಿಧನರಾದಾಗ ನೂರ್‌ಳಿಗೆ ಕೇವಲ 12 ವರ್ಷ ವಯಸ್ಸಾಗಿತ್ತು. ಇನಾಯತ್ ಖಾನ್‌ರು 'ನೂರ್'ಗೆ ಹೇಳುತ್ತಿದ್ದರು. "ನೀವು ಮೈಸೂರು ಹುಲಿ ಟಿಪ್ಪು ಸುಲ್ತಾನರ ಮರಿ ಮೊಮ್ಮಕ್ಕಳು. ನೀವು ರಾಜಮನೆತನದವರು, ಯಾವುದಕ್ಕೂ ಹೆದರಬೇಡಿ. ಜಗತ್ತಿನಿಂದ ಏನನ್ನೂ ಒಯ್ಯಲಾರಿರಿ, ಜಗತ್ತಿನ ಯಾವ ಮೂಲೆಯಲ್ಲಿಯೇ ಆಗಲಿ ನೀವು ಅಭಿಮಾನದಿಂದ ತಲೆ ಎತ್ತಿ ಬದುಕಿರಿ" ಎಂದು ಹೇಳುತ್ತಿದ್ದರು. 1926ರಲ್ಲಿ ಅವರು ಭಾರತಕ್ಕೆ ಹಿಂತಿರುಗುವಾಗ ಎಲ್ಲರಿಗೂ ಕರೆದು ತಿಳಿಸಿದ್ದರು, "ನಾನು ಭಾರತಕ್ಕೆ ಹೋದ ಮೇಲೆ ಮತ್ತೆ ಇಲ್ಲಿಗೆ ಹಿಂದಿರುಗಲಾರೆ" ಎಂದು.

### ನೂರ್‌ಳ ಬಾಲ್ಯ

ತಂದೆಯ ಸೂಫೀ ಸಿದ್ಧಾಂತದ ಪ್ರಭಾವವಿದ್ದ ನೂರ್ ಅಹಿಂಸಾವಾದಿಯಾಗಿದ್ದಳು. ಭಾರತದ ಸ್ವಾತಂತ್ರ್ಯಕ್ಕಾಗಿ ಹಂಬಲಿಸುತ್ತಿದ್ದಳು. ನೂರ್ ಪೌರ್ವಾತ್ಯ ವಿಷಯಗಳನ್ನು ಅಭ್ಯಾಸ ಮಾಡಿದಳು. ಹಜ್ರತ್ ಇನಾಯತ್‌ಖಾನ್‌ರು ಸಂಗೀತ ಶಿಕ್ಷಕರಾಗಿಯೂ ರಷ್ಯದ ಕ್ರಾಂತಿಯ ಮುಂಚಿನ ದಿನಗಳಲ್ಲಿ ಕೆಲಸ ನಿರ್ವಹಿಸಿದ್ದರು. ನೂರ್‌ಳಿಗೆ ಶಾಲೆಯಲ್ಲಿ ಎಲ್ಲರ ಪ್ರೀತಿ ವಾತ್ಸಲ್ಯ ದೊರಕಿತ್ತು. ಅವರು ಅವಳನ್ನು "ಉತ್ತಮ ಸಂಗಾತಿ" "ಗುಡ್ ಕಾಮ್ರೇಡ್‌ಶಿಪ್" ಆಗಿ ಆಯ್ಕೆ ಮಾಡಿದ್ದರು. ಅವಳ ಕೇವಲ 12ನೇ ವಯಸ್ಸಿನಲ್ಲಿ ತಂದೆ ನಿಧನರಾದುದಕ್ಕೆ ಆಘಾತವಾಯಿತು. ತಾಯಿ ಕಾಯಿಲೆಯಿಂದ ಹಾಸಿಗೆ ಹಿಡಿದಿದ್ದರು. ಆದ್ದರಿಂದ ಮನೆಯ ಎಲ್ಲ ಜವಾಬ್ದಾರಿ ನೂರ್‌ಳದೇ ಆಯಿತು. ಅವಳು ಪುಟ್ಟ ತಾಯಿಯಾಗಿ ಮಾರ್ಪಟ್ಟು ಮನೆ–ತಮ್ಮ–ತಂಗಿಯರ ಜವಾಬ್ದಾರಿಯನ್ನು ನಿರ್ವಹಿಸಿದಳು. ಅವಳನ್ನು ಬಲ್ಲವರೆಲ್ಲರೂ ಹೃದಯಂತರಾಳದಿಂದ ಪ್ರೀತಿಸುವ ವ್ಯಕ್ತಿತ್ವ ನೂರ್‌ಳದಾಗಿತ್ತು.

### ಲೇಖಕಿ ಸಾಹಸಿ ಹಾಗೂ ಅಧ್ಯಯನಶೀಲೆ ನೂರ್



ಕಿತ್ತು ತಿನ್ನುವ ಬಡತನ ಅವರನ್ನು ಪೀಡಿಸುತ್ತಿತ್ತು. ನೂರ್‌ಳ ಆತ್ಮಚರಿತ್ರೆಕಾರ ಹೇಳುತ್ತಾನೆ "ಅವಳೊಂದು ಭಿನ್ನ ಲಯದ ಹುಡುಗಿ." ಅವಳ ಜೀವನದ ಗತಿ ಬೇರೆ ಹುಡುಗಿಯರಂತಲ್ಲ. ಭಾರತೀಯ ಮುಸ್ಲಿಂ ಮಹಿಳೆಯಾಗಿದ್ದರೂ ಯುರೋಪಿಯನ್ನಳಾಗಿ ಬೆಳೆದಳು. "ಮಗುವಿನ ಮನಸ್ಸು" ಕುರಿತು ಅಧ್ಯಯನ ಮಾಡಿ ಪದವಿ ಪಡೆದಳು (ಚೈಲ್ಡ್ ಸೈಕಾಲಜಿ). ಭಿನ್ನ ಭಿನ್ನ, ಹೊಸಹೊಸ ಭಾಷೆಗಳನ್ನು ಕಲಿತಳು. ವಿಭಿನ್ನ ರಾಷ್ಟ್ರ–ಖಂಡಗಳಲ್ಲಿ ಪ್ರವಾಸ ಮಾಡಿದಳು. ಭಾರತೀಯ ಮುಸ್ಲಿಂ ಮಹಿಳೆಯಾಗಿದ್ದ ನೂರ್–ಭಾರತ ಸ್ವಾತಂತ್ರವಾಗಬೇಕು. ಅದರಂತೆ ಇತರ ರಾಷ್ಟ್ರಗಳೂ ಸ್ವಾತಂತ್ರವಾಗಬೇಕೆಂಬ ಕನಸು ಕಂಡಿದ್ದಳು. ಅವಳು ಪ್ರವಾಸ ಕಥನ, ಲೇಖನ, ಸಣ್ಣ ಕಥೆಗಳನ್ನು ಬರೆದು ಪ್ರಕಟಿಸತೊಡಗಿದಳು. ಅವಳ ಕತೆಗಳು ರೇಡಿಯೋದಲ್ಲಿ ಬಿತ್ತರವಾಗತೊಡಗಿದವು. ಮಕ್ಕಳಿಗಾಗಿ ಒಂದು ಪತ್ರಿಕೆ ತರುವ ಪ್ರಯತ್ನದಲ್ಲಿದ್ದಾಗಲೇ ಮೊದಲನೇ ಮಹಾಯುದ್ಧ ಆರಂಭವಾಯಿತು. ಯುದ್ಧಪೂರ್ವದಲ್ಲಿ ನೂರ್ ತಂಗಿಯೊಂದಿಗೆ "ರೆಡ್‌ಕ್ರಾಸ್" ನರ್ಸಿಂಗ್ ಕೋರ್ಸ್ ಮಾಡಿದಳು. ಜನಸಾಮಾನ್ಯರ ಬದುಕನ್ನು ನರಕವಾಗಿಸಿದ್ದ ನಾಝಿಗಳ ವಿರುದ್ಧ ಹೋರಾಡಲು ಪಣತೊಟ್ಟಳು. ಪ್ಯಾರಿಸ್‌ನಲ್ಲಿ "ಔಷಧಿ"ಗಳ ಕುರಿತು ಅಧ್ಯಯನ ಮಾಡಿದಳು. ನೂರ್‌ಳ ಲೋಕವೇ ಬೇರೆ. ಅವಳೊಂದು ಭಿನ್ನ ಶಕ್ತಿಯುತ ತಾಳದೊಂದಿಗೆ ಹೆಜ್ಜೆ ಹಾಕುತ್ತಿದ್ದಳು. ಒಳ್ಳೆಯ ಧ್ವನಿಯ ಒಡತಿಯೂ ಅವಳಾಗಿದ್ದಳು.

ಅವಳ 24ನೇ ವಯಸ್ಸಿನಲ್ಲಿ, ಅಂದರೆ 1939ರಲ್ಲಿ ಅವಳ ಮಕ್ಕಳ ಕತೆಗಳ ಪುಸ್ತಕ ಭಾರತದ ಸಾಂಪ್ರದಾಯಿಕ ಕತೆಗಳ ಸಂಕಲನವಾದ "ಇಪ್ಪತ್ತು ಜಾತಕದ ಕತೆಗಳು" ಪ್ರಕಟವಾಯಿತು. ಅವಳು ಸಂಗೀತ ಕಲಿಯುತ್ತಿದ್ದ ಸಮಯದಲ್ಲಿ ಪ್ರೀತಿಸಿ ಮದುವೆಯಾಗಬೇಕೆಂದುಕೊಂಡಳು. ಆದರೆ ಅದಕ್ಕೆ ಅವರ ಕುಟುಂಬ ವಿರೋಧಿಸಿತು. ವಿಲಾಯತ್ ಅಕ್ಕನಿಗಾಗಿ ಚಿಂತಿಸುತ್ತಿದ್ದ. ಆದರೆ ನೂರ್ ಭಾವುಕ ಗೃಹಿಣಿಯ ಪಾತ್ರಕ್ಕಿಂತ ರಚನಾತ್ಮಕ ಉದ್ದೇಶದ ಬೌದ್ಧಿಕ ಶಕ್ತಿಯುತವಾದ ಕೆಲಸ ಮಾಡಲು ಇಷ್ಟಪಟ್ಟಳು. ಅದೇ ಸಮಯದಲ್ಲಿ ಇಡೀ ವಿಶ್ವವೇ ವಿಶ್ವ ಸಮರದಿಂದ ತತ್ತರಿಸತೊಡಗಿತು. ನಾಝಿಗಳ ಕ್ರೂರ ವರ್ತನೆಯಿಂದ ಜನ ನರಕ ಸದೃಶ ನೋವು ಅನುಭವಿಸುತ್ತಿರುವುದನ್ನು ಕಂಡ ನೂರಿ–ಮದುವೆಯ ವಿಚಾರವನ್ನು ಮುರಿದು ಹಾಕಿ ಯುದ್ಧದಲ್ಲಿ ನೊಂದವರ ಸೇವೆಗೆ ನರ್ಸಾಗಬೇಕೆಂದು ಖೈರುನ್ನಿಸಾ (ಕ್ಲೇರ್)ಳೊಂದಿಗೆ ನರ್ಸಿಂಗ್ ಪ್ರಥಮ ಚಿಕಿತ್ಸೆಯನ್ನು ಕಲಿತಳು. ಅವಳಲ್ಲಿ ಬಹಳ ದಿನಗಳ ಆಂತರಿಕ ಯುದ್ಧದ ನಂತರ ಅವಳು ಇಷ್ಟಪಟ್ಟ ಹುಡುಗ ಕೂಡ ನೂರ್ ಸಾಮಾನ್ಯ ಮಹಿಳೆಯಂತೆ ಮನೆ ಮಕ್ಕಳನ್ನು ನೋಡಿಕೊಂಡಿರಬೇಕು ಎಂದು ಬಯಸುತ್ತಿದ್ದ. ಆದ್ದರಿಂದ ನೂರಿ ಮದುವೆಯನ್ನು ನಿರಾಕರಿಸಿ ಯುದ್ಧದಲ್ಲಿ ನೊಂದವರ ಸಹಾಯಕ್ಕೆ ನಿಂತಳು.

### ಧೀರ ನಾಯಕಿ ನೂರ್

1940ರಲ್ಲಿ ತುಂಬಾ ಕಷ್ಟದಿಂದ ಫ್ರಾನ್ಸ್‌ನಿಂದ ಲಂಡನ್‌ಗೆ ನೂರ್ ಕುಟುಂಬ ವಾಪಸ್ಸಾಯಿತು. ಆಗ ತಮ್ಮ ವಿಲಾಯತ್ ಖಾನ್ "ರಾಯಲ್ ಏರ್‌ಫೋರ್ಸ್" (RAF) ಸೇರಿದನು. ನಾಝಿ ವಿರೋಧಿ ಹೋರಾಟದ ಪಣ ತೊಟ್ಟಿದ್ದ ನೂರ್ ಆಕ್ಸ್‌ಫರ್ಡಿನಲ್ಲಿ ತನ್ನ 26ನೇ ವಯಸ್ಸಿನಲ್ಲಿ ನವೆಂಬರ್ 1940ರಲ್ಲಿ W.A.A.F. (ವುಮೆನ್ ಆಕ್ಸಲರಿ ಏರ್‌ಫೋರ್ಸ್) ಮಹಿಳೆಯರ ಸಹಾಯಕ ವಾಯುದಳವನ್ನು ಸೇರಿದಳು. ಅಲ್ಲಿ ವೈರ್‌ಲೆಸ್ ಆಪರೇಶನ್ ಮತ್ತು ಪ್ಯಾರಾಶುಟ್‌ಗೆ ಸಂಬಂಧಿಸಿದ ತರಬೇತಿ ಪಡೆದಳು. 1941ರಲ್ಲಿ ಬಾಂಬರ್‌ಗೆ (ಯುದ್ಧವಿಮಾನ) ಸಂಬಂಧಿಸಿದ ತರಬೇತಿ ಪಡೆದಳು. ಸೂಕ್ಷ್ಮ ಸಂವೇದಿ ಸಂಕೇತಗಳ ತರಬೇತಿ ಪಡೆಯುತ್ತಿದ್ದಳು. ಅವಳ ಸೋದರ ಜೇನ್ ಹೇಳುತ್ತಿದ್ದ "ಅವಳು ತ್ಯಾಗಕ್ಕಾಗಿಯೇ ಹುಟ್ಟಿದವಳು. ಅವಳು ನಮ್ಮ ಕುಟುಂಬದ ಆಸ್ತಿಯಲ್ಲ ಬದಲಾಗಿ ಇಡೀ ವಿಶ್ವಕ್ಕೆ ಸೇರಿದವಳು, ಇಡೀ ವಿಶ್ವವೇ ಅವಳದು" ಎಂದು ಹೇಳುತ್ತಿದ್ದನು.

1943ರ ಫೆಬ್ರವರಿ ತಿಂಗಳಲ್ಲಿ ಅವಳಿಗೆ "ಏರ್‌ಮಿನಿಸ್ಟ್ರಿ"ಗೆ ವರ್ಗಾಯಿಸಲಾಯಿತು. ಎಸ್.ಓ.ಇ. ತರಬೇತಿಗೆ ನಿಯೋಜಿಸಲ್ಪಟ್ಟಳು. ಬರ್ಕಿಂಗ್ ಹ್ಯಾಂಶೈರ್‌ನಲ್ಲಿ ವೈರ್‌ಲೆಸ್ ಆಪರೇಟರ್ ವಿಶೇಷ ತರಬೇತಿ ಪಡೆದಳು. 1943ರ ಜೂನ್ 16ರಂದು ಜೀನ್ ಮೇರಿ ರಿಗ್‌ನೇರ್ ಎಂಬ ಹೆಸರಿನಿಂದ ಪ್ಯಾರಿಸ್ಸಿನಲ್ಲಿ ಪ್ಯಾರಾಶೂಟ್ ಮೂಲಕ ಬಂದಿಳಿದು ಬ್ರಿಟನ್‌ಗೆ ಸಂದೇಶ ಕಳುಹಿಸುವ ಕೆಲಸ ನಿರ್ವಹಿಸುತ್ತಿದ್ದಳು. ಇಂತಹ ಗುರುತರ ಕೆಲಸಕ್ಕೆ ನೇಮಿಸಿದ ಮೊದಲ ಮಹಿಳೆ **ನೂರ್** ಆಗಿದ್ದಳು. ಅವಳು ತನ್ನ ಗುಪ್ತನಾಮ 'ಜೀನ್ ಮೇರಿ ರಿಗ್‌ನೇರ್' ಹೆಸರಿನಿಂದ ಪ್ಯಾರಿಸ್ಸಿನಲ್ಲಿ ಕೆಲಸ ನಿರ್ವಹಿಸಿದಳು.

### ನೂರ್‌ಳ ಅಂತಿಮ ದಿನಗಳು

ಪ್ಯಾರಿಸ್ಸಿನಿಂದ ಬ್ರಿಟನ್‌ಗೆ ಸಂದೇಶ ಕಳಿಸುವ ಕೆಲಸದಲ್ಲಿರುವಾಗ ಒಮ್ಮೆ ಜರ್ಮನ್ ಪೊಲೀಸ್ ಗುಪ್ತ ದಳದವನಿಗೆ ಸಿಕ್ಕಿ ಬಿದ್ದಳು. ಅವನು **ನೂರ್**ಳನ್ನು ಬೆನ್ನಟ್ಟಿ ಬರುತ್ತಿದ್ದಾಗ ತಿರುಗಿ ನಿಂತ **ನೂರ್** ಅವನನ್ನು ಗುಂಡಿಟ್ಟು ಕೊಂದು ಅಪಾಯದಿಂದ ಪಾರಾದಳು. ಅಪಾಯದ ಸೂಚನೆ ಕಂಡ ಇಂಗ್ಲೆಂಡ್ ಗುಪ್ತದಳ ನೂರ್‌ಗೆ ಪ್ಯಾರಿಸ್ಸಿನಿಂದ ಹಿಂತಿರುಗಬೇಕೆಂದು ತಿಳಿಸಿತು. ಆದರೆ ಅವಳು ಕಾರ್ಯಮುಂದುವರಿಸಲು ಇಷ್ಟಪಟ್ಟಳು. ಅವಳು ಎಲ್ಲಿ ಹೋದರೂ ಜೊತೆಗೆ ನೋಟ್ ಬುಕ್ ಇಡುತ್ತಿದ್ದಳು. ಅದರಲ್ಲಿ ತಾನು ಕಳಿಸಿದ ಸಂದೇಶಗಳನ್ನು ದಾಖಲಿಸುತ್ತಿದ್ದಳು. ಮಲಗುವಾಗ ನೋಟ್‌ಬುಕ್ ತನ್ನ ಬಳಿಯಿಟ್ಟುಕೊಂಡೇ ಮಲಗುತ್ತಿದ್ದಳು.

ಒಂದು ದಿನ ನೂರ್ ಹೊರಗಿನಿಂದ ಬಂದಾಗ ಮನೆಯಲ್ಲಿ ಪೊಲೀಸ್ ಗುಪ್ತದಳದವರು ಅವಳಿಗಾಗಿ ಕಾಯುತ್ತಿದ್ದರು. ಬಂದೂಕು ತೋರಿಸಿ ಟ್ರಾನ್ಸ್‌ಮಿಟರ್ ಮತ್ತು ನೋಟ್‌ಬುಕ್ ವಶಪಡಿಸಿಕೊಂಡ ಅವರಿಗೆ ತಾನು ಬಾತ್‌ರೂಂಗೆ ಹೋಗಬೇಕೆಂದು ಅನುಮತಿ ಪಡೆದು ಅಲ್ಲಿಂದ ಪಾರಾಗಲು ಪ್ರಯತ್ನಿಸಿ ವಿಫಲಳಾದಳು. ಜರ್ಮನ್ ಗುಪ್ತದಳದವನೊಬ್ಬ ನೂರ್‌ಳನ್ನು ಪ್ಯಾರಿಸ್ ಕಛೇರಿಗೆ ಒಯ್ಯುವಾಗ ಆಕೆ ನೇರ ದೃಷ್ಟಿಯಿಂದ ಸಿಂಹಿಣಿಯಂತೆ ನೋಡುತ್ತಾ ಹೇಳುತ್ತಾಳೆ ನಿಶ್ಚಲ ದೃಢವಾದ ಧ್ವನಿಯಲ್ಲಿ "ನಿನಗೆ ಗೊತ್ತೆ? ನಾನು ಯಾರು? ಏನು ಮಾಡುತ್ತಿದ್ದೇನೆಂದು? ನೀನು ನನ್ನ ರೇಡಿಯೋ ಕಸಿದುಕೊಳ್ಳಬಹುದು. ಆದರೆ ನಾನು ಏನನ್ನೂ ಹೇಳಲಾರೆ–ಒಂದೇ ಒಂದು ಮಾತು ಕೇಳುವೆ. ಆದಷ್ಟೂ ಬೇಗ ನನ್ನನ್ನು ಕೊಲ್ಲು" ಅವಳು ಪರಾರಿಯಾಗಲು ಎರಡನೇ ಬಾರಿಯೂ ಪ್ರಯತ್ನಿಸಿ ವಿಫಲಳಾಗುತ್ತಾಳೆ.

ಕ್ಯಾಪ್ಟನ್ ಸೆವಿಲಿನ್ ಜಿಪ್‌ಸನ್‌ರು ಹೇಳುತ್ತಾರೆ. "ನೂರ್ ಬಹಳ ಸ್ಪಷ್ಟ ಮತ್ತು ನೇರ. ಆ ಮಧ್ಯಾಹ್ನ ನನ್ನೆದುರು ಕಿಚನ್‌ನ ಇಕ್ಕಟ್ಟಾದ ಚಿಕ್ಕ ಕೋಣೆ ಚೇರ್‌ನಲ್ಲಿ ಅವಳು ಕುಳಿತಿದ್ದಳು. ಎದುರಿಗೆ ಕಟ್ಟಿಗೆಯ ಟೇಬಲ್ಲು ಇತ್ತು. ನಾನು ಅವಳ ಶಾಂತ ಕಪ್ಪು ಕಣ್ಣುಗಳಲ್ಲಿ ದೃಢ ವಿಶ್ವಾಸದ ಅಚಲ ಸ್ಪಷ್ಟತೆಯನ್ನು ಕಂಡೆ. ಮೃದು ಧ್ವನಿಯ ಮತ್ತು ಶಕ್ತಿಯುತ ಚೈತನ್ಯದ ಚಿಲುಮೆ ಅವಳಲ್ಲಿ ಓತಪ್ರೋತವಾಗಿ ಹರಿಯುತ್ತಿರುವುದನ್ನು ಕಂಡೆ" ಎನ್ನುತ್ತಾರೆ. ಆಕೆ ಕನಸುಗಾತಿ, ಭಿನ್ನಲೋಕದ, ಭಿನ್ನತಾಳದ ಹುಡುಗಿ. ಅವಳ ಚರಿತ್ರೆಕಾರ ಹೇಳುತ್ತಾನೆ: "ನೂರ್‌ಳ ಲೋಕವೇ ಬೇರೆ, ಅವಳೊಂದು ಭಿನ್ನ–ಶಕ್ತಿಯುತ ತಾಳದೊಂದಿಗೆ ಹೆಜ್ಜೆ ಹಾಕುತ್ತಿದ್ದಳು. ತಂದೆಯಂತೆ ಅವಳೂ ಕೂಡ ಉತ್ತಮ ಹಾಡುಗಾರ್ತಿಯಾಗಿದ್ದಳು."

"ಅವಳನ್ನು ಬಲ್ಲ ಎಲ್ಲರೂ ಅವಳನ್ನು ತುಂಬ ಗೌರವದಿಂದ ಕಾಣುತ್ತಿದ್ದರು. ಏಕೆಂದರೆ ಅವಳು ಎಲ್ಲರನ್ನೂ ವಿವರವಾಗಿ ವಿಚಾರಿಸಿ, ಅವರೊಂದಿಗೆ ಮಾತಾಡುತ್ತಿದ್ದಳು. ಜನರನ್ನೇ ಏಕೆ ಅವಳು ತನ್ನ ಜೇಲರ್‌ನ ಕಷ್ಟ ಸುಖಗಳನ್ನೂ ವಿಚಾರಿಸುತ್ತಿದ್ದಳು" ಎನ್ನುತ್ತಾರೆ ಪೀರ್ ವಿಲಾಯತ್ ಇನಾಯತ್ ಖಾನ್.



ಫ್ರಾನ್ಸ್‌ನ ಪೊಲೀಸರು ಎಷ್ಟು ಪ್ರಯತ್ನಪಟ್ಟರೂ ಅವಳು ಕಳಿಸಿದ ಸಂದೇಶಗಳ ಗುಪ್ತ ಕೋಡ್‌ಗಳ ಅರ್ಥವನ್ನು ನೂರಿ ಅವರಿಗೆ ಹೇಳಲೇ ಇಲ್ಲ. ಅವರೊಂದಿಗೆ ಸಹಕರಿಸಲು ಅವಳಿಗೆ ಅವರು ಬಹಳ ಕೇಳಿಕೊಂಡರು. ಅವರೆಷ್ಟೇ ಭಯಂಕರ ಚಿತ್ರ ಹಿಂಸೆ ನೀಡಿದರೂ ಸಹ ಅವಳು ಏನನ್ನೂ ಹೇಳಲಿಲ್ಲ. ಅವರಿಗೆ ಕೇವಲ ಅವಳ ಹೆಸರು "ಮ್ಯಾಡಲೀನ್" ಅಲ್ಲ ಬದಲಾಗಿ "ನೂರ್ ಇನಾಯತ್ ಖಾನ್" ಹಾಗೂ ಅವಳು ಇಂಗ್ಲೆಂಡ್‌ಗಾಗಿ ಕೆಲಸ ಮಾಡುತ್ತಿದ್ದಳು ಎಂಬುದನ್ನು ಮಾತ್ರ ತಿಳಿದುಕೊಳ್ಳಲು ಸಾಧ್ಯವಾಯಿತು. ಜರ್ಮನಿಯ ಜೈಲಿನಲ್ಲಿ 9ತಿಂಗಳ ಕಾಲ ಅಸಾಧ್ಯ ನೋವು ಚಿತ್ರಹಿಂಸೆ ನೀಡಿದಾಗಲೂ ನೂರಿಯಿಂದ ಏನನ್ನೂ ತಿಳಿದುಕೊಳ್ಳಲು ಸಾಧ್ಯವಾಗದೆ ಹೋದಾಗ–ಚಿತ್ರಹಿಂಸೆಗೂ ವಿಚಲಿತಳಾಗದ ಅವಳ ಸಹನೆಯ ಬಗ್ಗೆ ಪೊಲೀಸರೇ ಎಷ್ಟೋ ಸಲ ತಮ್ಮ ಆಯುಧಗಳನ್ನು ಚೆಲ್ಲಿ ಕುಳಿತುಕೊಳ್ಳುತ್ತಿದ್ದರು.

ನೂರ್‌ಳನ್ನು ಜರ್ಮನಿಯಲ್ಲಿ ಅಪಾಯಕಾರಿ ಕೈದಿಗಳನ್ನಿಡುತ್ತಿದ್ದ ಜೈಲಿನಲ್ಲಿಟ್ಟಿದ್ದರು. ಅವಳ ಕೈಕಾಲುಗಳನ್ನು ಸರಳುಗಳಿಂದ ಕಟ್ಟಿದ್ದರು. ಅವಳ ಊಟವನ್ನೂ ಸಹ ಅವಳೇ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಫ್ರೆಂಚ್ ರಾಜಕೀಯ ಕೈದಿಗಳು ಅಲ್ಲಿದ್ದರು. ದಿನವೂ ಅಲ್ಲಿಯ ಕೈದಿಗಳಿಗೆ ಸಂದೇಶ ಕಳಿಸುತ್ತಿದ್ದ ನೂರ್ ಸೆಪ್ಟೆಂಬರ್ 11, 1944ರಂದು ನಡುಗುವ ಕೈಯಿಂದ "ನಾನಿನ್ನು ಹೋಗುತ್ತಿರುವೆ" ಎಂದು ಬರೆದಿದ್ದಳು. ಆ ಸಂದೇಶ ಅವಳ ಅಂತಿಮ ಸಂದೇಶವಾಯಿತು. ಸೆಪ್ಟೆಂಬರ್ 12, 1944ರಂದು ನೂರ್ ಹಾಗೂ ಅವಳ ಮೂವರು ಸಂಗಾತಿಗಳನ್ನು ಭಯಂಕರವಾದ ಡಚ್ ಕಾನ್ ಸೆಂಟ್ರೇಷನ್ ಕ್ಯಾಂಪ್‌ಗೆ ಕರೆದುಕೊಂಡು ಹೋಗಲಾಯಿತು. ಅದು 200 ಮೈಲಿ ದೂರದಲ್ಲಿತ್ತು. ಅಲ್ಲಿಗೆ ಮಧ್ಯರಾತ್ರಿ ತಲುಪಿದರು. ರಾತ್ರಿ ಅವರನ್ನು ಅಲ್ಲಿಯೇ ಕೂಡಿಟ್ಟು, ಬೆಳಿಗ್ಗೆ ವಧಾಸ್ಥಾನಕ್ಕೆ ಕರೆದೊಯ್ದರು. ಅವಳಿಗೆ ಮಂಡಿಯೂರಿ ಕುಳಿತುಕೊಳ್ಳಲು ಹೇಳಿದರು. ಅವಳು ಕುಳಿತುಕೊಂಡಾಗ ಹಿಂದಿನಿಂದ ಅವಳಿಗೆ ಗುಂಡಿಟ್ಟು ಕೊಲ್ಲಲಾಯಿತು. ಆಗ ನೂರ್‌ಳ ವಯಸ್ಸು ಕೇವನ 30 ಮಾತ್ರ. ಅವಳನ್ನು ಕೊಲ್ಲುವ ಒಂದು ದಿನ ಮುಂಚೆ ಡಚ್ ಪ್ರದೇಶ ಅಮೆರಿಕದಿಂದ ಸ್ವತಂತ್ರವಾಗಿತ್ತು. ಅವಳು ಸಾಯುವ ಮುನ್ನ ಹೇಳಿದ ಶಬ್ದಗಳು "ಸ್ವಾತಂತ್ರ್ಯ" ಎಂದು ಪ್ರತ್ಯಕ್ಷ ಸಾಕ್ಷಿಗಳು ಹೇಳುತ್ತಾರೆ. ಅಂತಿಮವಾಗಿ ಗಾರ್ಡ್ ಹೇಳುತ್ತಾನೆ. "ಹಿಟ್ಲರನನ್ನು ಶ್ಲಾಘಿಸು" ಎಂದರೆ ಅವಳು ತಿರಸ್ಕರಿಸುತ್ತಾಳೆ. ಹೇಳುತ್ತಾಳೆ, "ಒಂದು ದಿನ ಬರುತ್ತದೆ ಆಗ ನಿನಗೆ ಸತ್ಯದ ಅರಿವಾಗುತ್ತದೆ."

### ಕರ್ನಾಟಕದ ಕಿಡಿ ನೂರ್

ಇಂತಹ ಹೋರಾಟಗಾರ್ತಿ, ಸ್ವಾಭಿಮಾನದ ಕಿಡಿ ನೂರ್ ಕರ್ನಾಟಕದ ಹೆಮ್ಮೆಯ ಕುಡಿ. ಹಿಟ್ಲರ್‌ನ ಅಟ್ಟಹಾಸವನ್ನು ತಡೆಯಲು ಜೀವದ ಹಂಗು ತೊರೆದು ಹೋರಾಡಿದ ಅಪ್ಪಟ ಹೋರಾಟಗಾರ್ತಿ. ಕರ್ನಾಟಕ ಇತಿಹಾಸದಲ್ಲಿ ನೂರ್‌ಳ ಹೆಸರನ್ನು ಅಚ್ಚಳಿಯದೇ ಉಳಿಸಬೇಕಾಗಿದೆ! ನಾಗರೀಕ ಸಮಾಜವನ್ನು ನುಚ್ಚು ನೂರಾಗಿಸಿದ

ಫ್ಯಾಸಿಸ್ಟ್ ದೌರ್ಜನ್ಯ ಎಸಗುತ್ತಿದ್ದ ಹಿಟ್ಲರ್‌ನ ವಿರುದ್ಧ ಹೋರಾಡಿದ ವೀರವನಿತೆ ನೂರಿ ನಮ್ಮವಳು. ಕನ್ನಡ ನೆಲದ ಕುಡಿಯಾದ ನೂರಿಗೆ ಒಂದು ಸ್ಮಾರಕವೂ ಕರ್ನಾಟಕದಲ್ಲಿ ಇಲ್ಲದಿರುವುದು ವಿಷಾದನೀಯ! ಗುಲಾಮಿ ಭಾರತ ಸೇರಿದಂತೆ ವಿಶ್ವದ ಎಲ್ಲ ರಾಷ್ಟ್ರಗಳೂ ಸ್ವತಂತ್ರವಾಗಬೇಕೆಂಬ ಕನಸಿದ್ದ ಮಹತ್ವಾಕಾಂಕ್ಷಿ ಅವಳು. ವಿಶ್ವಯುದ್ಧದ ಸಮಯದಲ್ಲಿ "ಭಾರತ ಈ ಯುದ್ಧದಲ್ಲಿ ಉನ್ನತ ಮಿಲಿಟರಿ ಯಶಸ್ಸು ಸಾಧಿಸಲಿ. ಇದು ಭಾರತ ಮತ್ತು ಬ್ರಿಟನ್ ದೇಶಗಳ ನಡುವೆ ಸೇತುವೆಯಾಗಲಿ," ಎಂದು ಬಯಸುತ್ತಿದ್ದಳು. "ಬೇಹುಗಾರಿಕೆಯ ರಾಣಿ"ಯಾದ ಎರಡನೇ ವಿಶ್ವಯುದ್ಧದಲ್ಲಿ ಹೆಸರು ಮಾಡಿದ, ಭಾರತೀಯ ಮೂಲದ ನೂರ್ ಇನಾಯತ್ ಖಾನ್ ಅವರ ಸಂಸ್ಮರಣಾ ಕಾರ್ಯಕ್ರಮವನ್ನು ಕೇಂಬ್ರಿಡ್ಜ್‌ನ ಟ್ರಿನಿಟಿ ಕಾಲೇಜ್ ಇದೇ ನವೆಂಬರ್ 11, 2010ರಂದು ಹಮ್ಮಿಕೊಂಡಿದೆ. ಈ ಕಾರ್ಯಕ್ರಮದ ಮೂಲಕ ಸಂಗ್ರಹವಾಗುವ ಹಣದಿಂದ ನೂರ್ ಅವರ ಪ್ರತಿಮೆಯನ್ನು ನಿರ್ಮಿಸಿ ಲಂಡನ್‌ನ ಗೋರ್ಡೋನ್ ಚೌಕದಲ್ಲಿ ಸ್ಮಾರಕ ಸ್ಥಾಪಿಸಲು ನಿರ್ಧರಿಸಿದೆ. ನೂರ್ ಅವರ ಸ್ಮಾರಕವು ಬ್ರಿಟನ್‌ನಲ್ಲಿ ಸ್ಥಾಪಿತವಾಗುವ ಏಷ್ಯಾ ಮೂಲದ ಮಹಿಳೆಯೊಬ್ಬರ ಮೊದಲ ಸ್ಮಾರಕವಾಗಲಿದೆ. ಇದು ಮುಸ್ಲಿಂ ಭಾರತದ ಅದರಲ್ಲೂ ಕರ್ನಾಟಕದ ಮಹಿಳೆಯೊಬ್ಬರ ಮೊತ್ತ ಮೊದಲ ಸ್ಮಾರಕ ಎಂಬ ಹೆಗ್ಗಳಿಕೆಗೂ ಪಾತ್ರವಾಗಲಿದೆ.

ನೂರ್ ಮೊದಲ ಮಹಿಳಾ ರೇಡಿಯೋ ಆಪರೇಟರ್ ಕೂಡ ಆಗಿದ್ದಳು. ನೂರ್ ಇನಾಯತ್ ಖಾನ್‌ರವರ ಜೀವನ ಚರಿತ್ರೆಯನ್ನು ಶ್ರಾಬಣಿ ಬಸು ಅವರು ಬರೆದಿದ್ದಾರೆ. ಭಾರತದ ಚರಿತ್ರೆಯಲ್ಲಿ ಬ್ರಿಟಿಷರ ವಿರುದ್ಧ ಹೋರಾಡಿದ ವೀರ ಹುಲಿ ಟಿಪ್ಪುಸುಲ್ತಾನರ ವಂಶಸ್ಥಳಾದ ನೂರಿಯ ಸ್ಮರಣಾರ್ಥ ಬೆಂಗಳೂರು, ಮೈಸೂರಿನಲ್ಲಿ ಅವರ ಪ್ರತಿಮೆಯನ್ನು ಸ್ಥಾಪಿಸಿ ಆ ದಿಟ್ಟ ಮಹಿಳೆಯನ್ನು ಸಂಸ್ಮರಿಸಬಾರದೆ? ಭಾರತ ಸಂಜಾತೆಯ ಪ್ರತಿಮೆಯನ್ನು ಲಂಡನ್‌ನಲ್ಲಿ ಸ್ಥಾಪಿಸುತ್ತಿದ್ದರೆ, ಕರ್ನಾಟಕದಲ್ಲಿ ಈ ಹೆಮ್ಮೆಯ ಕುವರಿಯನ್ನು ಸ್ಮರಿಸುವುದು ಬೇಡವೆ? ಬ್ರಿಟಿಷ್ ಫ್ರೆಂಚ್ ಸರ್ಕಾರದ ಅತ್ಯುನ್ನತ ಗೌರವಗಳು ಆಕೆಗೆ ಲಭಿಸಿದ್ದವು. ಬ್ರಿಟಿಷ್ ಉನ್ನತ ಪ್ರಶಸ್ತಿ "ಜಾರ್ಜ್‌ಕ್ರಾಸ್" ಹಾಗೂ ಫ್ರಾನ್ಸ್‌ನ ಅತ್ಯುನ್ನತ ಪ್ರಶಸ್ತಿಗಳಾದ "ಗೋಲ್ಡ್‌ಸ್ಟಾರ್" ದೊರೆತವು. ಅವಳ ಜೈಲಿನ ಅಧಿಕಾರಿಯಾದ ಅರ್ನೆಸ್ವ ಹೇಳಿದ್ದ "ನೂರ್ ನೀನು ಅತ್ಯಂತ ಜಾಣೆ ಹಾಗೂ ಅಪರೂಪದ ವರದಾನದ ಹುಡುಗಿ" ಎಂದು. ಉನ್ನತ ಮಾನವೀಯ ಮೌಲ್ಯಗಳ ಸಂಕೇತವೇ ನೂರ್.

# ಕೋಸಂಬರಿ

ವಿಶಾಲ ಸಭಾಂಗಣ ಮಾತಿನ ಮಲ್ಲರ ಗಡಣ
ವೇದಿಕೆ ತುಂಬೆಲ್ಲ ತರಾವರಿ ಆಸನ
ವಿವಿಧ ಭಂಗಿಗಳಲಿ ವಿರಾಜಮಾನ
ಸುತ್ತಲಿನ ಸೋಪಾನ ಜಾಜ್ವಲ್ಯಮಾನ
ತರ್ಕ ವಿತರ್ಕ ವಾದಸರಣಿ
ತಾನು ನೋಡಿದ ಮೊಲಕೆ ಮೂರೇ ಕಾಲು
ಕದನಕುತೂಹಲ ರಾಗ

ಹಣೆಕಿಕ್ಕಿದ ಅಕ್ಕನ ಬಳಗ
ಪುಟ್ಟ ಆಸನಗಳ ಹಿಂದಿನ ಸಾಲು
ದಪ್ಪಕ್ಷರದ ಸೂಚನಾ ಫಲಕ
ಮಹಿಳೆಯರಿಗಾಗಿ
ಕಿಷ್ಕಿಂಧೆಯ ಅಪರಾವತಾರ

ಮೊಗತಿರುಗಿದ ಬಳಗ
ಬಯಲಲೊಂದು ಚಿಕ್ಕ ಟೆಂಟು
ಬಣ್ಣಬಣ್ಣದ ಜಮಖಾನ
ನವಧಾನ್ಯ ತರಕಾರಿ ಮೇಳ
ಪಾಯಸ ವಡೆ ಕೋಸಂಬರಿ ಪಾನಕ
ರಸಾಯನ ಸಾರು ಕೀರುಗಳ ಪಾಕ
ಸಭಾಂಗಣಕ್ಕೂ ಪಸರಿಸಿದ ಪರಿಮಳ
ಮಾನವೀಯತೆಗೆ ಉಚಿತ ಪ್ರವೇಶ
ಗತ್ತಿನ ಮಂದಿ ಕಕ್ಕಾಬಿಕ್ಕಿ
ದಕ್ಕಿದ ಅನುಭವಗಳ ಅನಾವರಣ
ಆಯಾ ಪಾಕದ ಹೂರಣ

■ ಚಂದ್ರಮತಿ ಸೋಂದಾ



# ಲಷ್ಕರ್-ಇ-ತಯ್‌ಬದ ಹುತಾತ್ಮ ಅಮ್ಮಂದಿರು

*ಅನು : ಬಿ.ಎನ್.ಎಸ್.*

*ಈ ಲೇಖನವು Farhat Haq ಅವರು ಬರೆದ 'Mothers Lashkar-e-Taiba' ಲೇಖನದ ಸಾರಸಂಗ್ರಹ. ಈ ಲೇಖಕರು ಅಮೆರಿಕಾದ ಇಲಿನಾಯ್ಸ್ ವಿಶ್ವವಿದ್ಯಾಲಯದ Monmouth ಕಾಲೇಜಿನ ರಾಜ್ಯಶಾಸ್ತ್ರ ವಿಭಾಗದಲ್ಲಿ ಉದ್ಯೋಗನಿರತರಾಗಿದ್ದು 2002-03ರ ಅವಧಿಯಲ್ಲಿ LET ನಡೆಸುವ ಮದ್ರಸಾ, ಅಧ್ಯಯನ ವೃತ್ತಗಳು, ರಾಜಕೀಯ ಚರ್ಚೆಯ ಕ್ಯಾಂಪ್‌ಗಳಲ್ಲಿ ಭಾಗವಹಿಸಿದ ಅನುಭವಸ್ಥರು. LETಯ ಮಹಿಳಾ ಶಾಖೆಯ ನಾಯಕಿಯರ ಪರಿಚಯವಿದ್ದವರು. ಈ ಲೇಖನದಲ್ಲಿ ಅವರ ಕ್ಷೇತ್ರ ಕಾರ್ಯಗಳ ಫಲವಾಗಿ ದೊರಕಿಸಿಕೊಂಡ ಮಾಹಿತಿಗಳನ್ನೂ, LETಯು ಪ್ರಕಟಿಸಿರುವ ಗ್ರಂಥದ ಸಾರ ವಿಶ್ಲೇಷಣೆಯನ್ನೂ ಕಾಣಬಹುದು. ``Militarism and Mother hood: The women of the Lashkar-i-Tayyaba in Pakistan" ಎಂಬ ಅವರ ಸಂಶೋಧನಾ ಲೇಖನ Signs. Journal of Women in Culture and Society 2007, Vol. 32, No.4 ರಲ್ಲಿ ಪ್ರಕಟವಾಗಿದೆ. ಪ್ರಸ್ತುತ ಲೇಖನದ ಮೂಲರೂಪವನ್ನು Economic & Political Weekly ಪತ್ರಿಕೆಯ ಮೇ 2, 2009, Vol.XLIV. No. 18ರಲ್ಲಿ ಕಾಣಬಹುದು.*

ಪಾಕಿಸ್ತಾನದಲ್ಲಿ ಕ್ರಿಯಾನಿರತವಾಗಿರುವ ಹಲವು ಜಿಹಾದಿ ಗುಂಪುಗಳ ಪೈಕಿ ಲಷ್ಕರ್-ಇ-ತಯ್ಬ (LET)ದ ವಿಶೇಷತೆ ಎಂದರೆ ಅದರಲ್ಲಿ ರಾಜಕೀಯವಾಗಿ ಮಹಿಳೆಯರನ್ನು ಸಂಘಟಿಸುವ ಕಾಳಜಿ ಬಲವಾಗಿದೆ ಎಂಬುದು. LETಯಲ್ಲಿ ಮಹಿಳಾ ವಿಭಾಗವೇ ಪ್ರತ್ಯೇಕವಾಗಿದ್ದು ಅದರಲ್ಲಿ ಮಹಿಳೆಯರು ಸಕ್ರಿಯವಾಗಿ ಭಾವಹಿಸುವಂತೆ ವಿಶೇಷ ಪ್ರೋತ್ಸಾಹವನ್ನು LET ನೀಡುತ್ತದೆ. ವರ್ಷಕ್ಕೊಮ್ಮೆ ಮಹಿಳೆಯರ ಸಮಾವೇಶ ನಡೆಸುವುದು, ಅವರಿಗಾಗಿ ಪ್ರತ್ಯೇಕ ಮದ್ರಸಾಗಳನ್ನು ನಡೆಸುವುದು, ಪ್ರತ್ಯೇಕ ಮಹಿಳಾ ಪತ್ರಿಕೆಗಳನ್ನು ಹೊರತರುವುದು, ಪುಸ್ತಕ ಪ್ರಕಾಶನ ಮುಂತಾದ ಕಾರ್ಯಗಳನ್ನು LETಯ ಮಹಿಳಾ ವಿಭಾಗ ಕೈಗೊಳ್ಳುತ್ತದೆ.

LET ಪ್ರಕಟಿಸುವ ಮ್ಯಾಗಜೀನ್‌ಗಳಲ್ಲಿ ಇತರ ಸಾಹಿತ್ಯ ಸಾಮಗ್ರಿಗಳಲ್ಲಿ ಪದೇ ಪದೇ ಒಂದು ವಿಚಾರವನ್ನು ಒತ್ತಿ ಹೇಳುವುದನ್ನು ಕಾಣಬಹುದು, "ತಾಯಂದಿರು ತಮ್ಮ ಎಳೆಯ ವಯಸ್ಸಿನ ಗಂಡುಮಕ್ಕಳನ್ನು ಜಿಹಾದೆ ಹೋರಾಟಕ್ಕಾಗಿ ಬಿಟ್ಟುಕೊಡ ಬೇಕಾಗಿದೆ. ಇದೇನೂ ಅವರಿಗೆ ಸುಲಭದ ಮಾತಲ್ಲ. ಅವರಿಗೆ ಜಿಹಾದ್ ಮೂಲಕ ದೊರಕುವ ದೈವಾನುಗ್ರಹದ ತಿಳಿವಳಿಕೆಯನ್ನು ನೀಡುವುದು ಅವಶ್ಯಕವಿದೆ. ಹೀಗೆ ಮಾಡಿದರೆ ಧರ್ಮಯುದ್ಧಕ್ಕಾಗಿ ಅವರು ತಮ್ಮ ಪುತ್ರರನ್ನು ಬಿಟ್ಟುಕೊಡಲು ಸಂತೋಷದಿಂದ ಒಪ್ಪಬಹುದು" ಈ ನಿಟ್ಟಿನಿಂದಲೇ ಮಹಿಳಾ ಮದ್ರಸಾಗಳು ಕೆಲಸ ಮಾಡುತ್ತವೆ.

LETಯ ಮೂಲಭೂತ ತಾತ್ತ್ವಿಕತೆ ಛಾದೊರ್ ಮತ್ತು ಚಾರ್‌ದೇವರಿಗಳದು. ಅಂದರೆ ಮುಸ್ಲಿಂ ಮಹಿಳೆಯರು ಪರದೆಯೊಳಗಿದ್ದು ನಾಲ್ಕುಗೋಡೆಗಳ ಒಳಗೇ ಬದುಕುವುದು ಧಾರ್ಮಿಕ ಸಮ್ಮತಿಯಿರುವ, ಮಹಿಳೆಯರ ನೈಸರ್ಗಿಕ ಜೀವನಕ್ರಮ ವಾಗಿರುತ್ತದೆ. ಹೀಗಿರುವಾಗ, ಇಂಥ ತಾತ್ತ್ವಿಕತೆಗೆ ತೀರ ವಿರುದ್ಧವಾಗಿ ರಾಜಕೀಯವಾಗಿ ಮಹಿಳೆಯರನ್ನು ಸಂಘಟಿಸಲು LETಗೆ ಏಕೆ ಇಂಥ ಕಳಕಳಿ? ಈ ಸಂಘಟನೆ ಹೊರತರುವ ಸಾಹಿತ್ಯವನ್ನು, ಇದರ ಸಾರ್ವಜನಿಕ ಘೋಷಣೆಗಳನ್ನು ಮತ್ತು ಕಾರ್ಯ ಚಟುವಟಿಕೆಗಳನ್ನು ವಿಶ್ಲೇಷಿಸಿ ನೋಡಿದ್ದಾದರೆ ತಮ್ಮ ಜಿಹಾದಿ ಧ್ಯೇಯ ಸಾಧನೆಗಾಗಿ ಮಿಲಿಟರೀಕೃತ ಜಾಗತಿಕ ಸಮುದಾಯವೊಂದನ್ನು ಸಂಘಟಿಸುವುದೇ LETಯ ಬಹುಮುಖ್ಯ ಉದ್ದೇಶವೆನ್ನುವುದು ಸ್ಪಷ್ಟವಾಗುತ್ತದೆ. ಜಿಹಾದಿ ಸಂಸ್ಕೃತಿಯನ್ನು ಬೆಳೆಸಿ



ಪೋಷಿಸುವುದಕ್ಕೆ ಮಹಿಳೆಯರೇ ಬಲು ಪ್ರಭಾವಕಾರಿ ಸಹಾಯಕರು ಎಂಬುದನ್ನು LET ಗುರುತಿಸಿಕೊಂಡಿದೆ.

ಎಲ್ಲಾ ಮುಸ್ಲಿಂ ಮಹಿಳೆಯರಲ್ಲೂ ತಮ್ಮ ಮಕ್ಕಳನ್ನು ಧರ್ಮ ರಕ್ಷಣೆಯ ಯುದ್ಧಕ್ಕಾಗಿ ಕಳಿಸುವಂತೆ ಪ್ರೇರೇಪಣೆ ನೀಡುವುದಕ್ಕಾಗಿ, ಈಗಾಗಲೇ ಇಂಥ ಹೋರಾಟಕ್ಕಾಗಿ ಪ್ರಾಣತೆತ್ತು ಹುತಾತ್ಮರಾದವರ ದುಃಖತಪ್ತ ತಾಯಂದಿರ ಅನುಭವದ ಸಾಕ್ಷ್ಯಕಥನ (Testimonial) ಗಳನ್ನು ಗ್ರಂಥ ರೂಪದಲ್ಲಿ LET ದಾಖಲಿಸಿದೆ. "ಹಮ್ ಮಾಓಯೇ ಲಷ್ಕರ್ ಇ ತಾಯ್‌ಬಕೀ" (we, The Mothers of Lashkar-e-Taiba) ಎಂಬ ಹೆಸರಿನ ಗ್ರಂಥವನ್ನು ಮೂರು ಸಂಪುಟಗಳಲ್ಲಿ LET ಮಹಿಳಾ ಶಾಖೆಯ ನಾಯಕಿ ಉಮ್ಮ ಹಮ್ಮದ್ ಸಂಕಲಿಸಿ ಪ್ರಕಟಿಸಿದ್ದಾರೆ. ಈ ಗ್ರಂಥ ಕಾಶ್ಮೀರದಲ್ಲಿನ LET ಹೋರಾಟಗಳಲ್ಲಿ ಮೃತರಾದ 'ಹುತಾತ್ಮ'ರ ಸಂಸ್ಮರಣೆಗಷ್ಟೇ ಸೀಮಿತವಲ್ಲ, ಅಂಥ ಯೋಧರನ್ನು ಹೆತ್ತ ತಾಯಂದಿರ ಮಹಾನ್ ತ್ಯಾಗವನ್ನು ವೈಭವೀಕರಿಸಿ ಕೊಂಡಾಡುತ್ತದೆ. ಕಾಶ್ಮೀರದಲ್ಲಿ ತಾವು ನಡೆಸುತ್ತಿರುವ ಯುದ್ಧ, ಹೋರಾಟ ನ್ಯಾಯಯುಕ್ತವೇ ಆಗಿದೆ ಎಂಬುದನ್ನು ಅದಕ್ಕಾಗಿ ಜೀವತೆತ್ತವರ ತಾಯಂದಿರ ದುಃಖದ ವಿವರವಾದ ಕಥನಗಳ ಮೂಲಕ ಓದುಗರಿಗೆ ತಿಳಿಸಲು ಈ ಗ್ರಂಥ ಯತ್ನಿಸುತ್ತದೆ. ತಮ್ಮ ಹದಿಹರೆಯದ ಗಂಡು ಮಕ್ಕಳನ್ನು, ತಮ್ಮ ಸಹೋದರರನ್ನು ಹೋರಾಟಕ್ಕೆ ಕಳಿಸಲು ಆ ತಾಯಿಯರು, ಸೋದರಿಯರು ಇಷ್ಟಪಟ್ಟಿರಲಿಲ್ಲ. ಆದರೆ ಜಿಹಾದಿ ಹೋರಾಟ ತಾತ್ತ್ವಿಕವಾಗಿ ಪ್ರಾಮಾಣಿಕವಾದದ್ದು ಎಂಬುದು ಅರ್ಥ ವಾದಾಗ ಅವರು ಸಂತೋಷದಿಂದ ತಮ್ಮ ಪುತ್ರರ, ಸೋದರರ ಬಲಿದಾನವನ್ನು ಒಪ್ಪಿದರು ಎಂಬ ಹಾಗೆ ಓದುಗರನ್ನು ನಂಬಿಸಲು ಈ ಸಂಪುಟಗಳು ಯತ್ನಿಸುತ್ತವೆ. ಯೋಧರ ಕುಟುಂಬಗಳ ಬದುಕಿನ ಕಷ್ಟಗಳ ಚಿತ್ರಣದ ಹಿನ್ನೆಲೆಯಲ್ಲಿ ಆ ಹುತಾತ್ಮಕ ತಾಯಂದಿರ ಮನದ ಮಾತಿಗೆ ಮೀರಿದ್ದಾದ ದುಃಖದ ಅಗಾಧತೆಯನ್ನು ಅವರದೇ ಮಾತುಗಳಲ್ಲಿ ಹಿಡಿದುಕೊಡುವ ಯತ್ನವಿದೆ. ಈ ದುಃಖದ ಹೃದಯ ಕರಗಿಸಬಲ್ಲ ವರ್ಣನೆಯ ಹಾಗೆಯೇ ತಮ್ಮ ತಾಯಿಯರ ಹಾಗೂ ಸೋದರಿಯರ ಮಾನ, ಘನತೆಗಳನ್ನು ಕಾಪಾಡಲು ಜೀವತೆತ್ತ ಆ ಮಕ್ಕಳ ಅಮ್ಮಂದಿರ ಹೆಮ್ಮೆ, ಸಂತಸಗಳನ್ನೂ ಇಲ್ಲಿ ದಾಖಲಿಸುವುದನ್ನು ಕಾಣಬಹುದು. ಮಹಿಳೆಯರಿಗೆ ಇಸ್ಲಾಂ ಧರ್ಮದ ನಿಜಸ್ವರೂಪದ ಬಗ್ಗೆ ಅರಿವೇ ಇಲ್ಲ. ಆದ್ದರಿಂದ ಮುಸ್ಲಿಂ ಉಮ್ಮಾಗೆ ಎದುರಾಗಿರುವ ಜಾಗತಿಕವಾದ ಅಪಾಯದ ಬಗ್ಗೆ ಸಮಕಾಲೀನ ರಾಜಕೀಯ ಎಚ್ಚರವನ್ನು ಅವರಲ್ಲಿ ಮೂಡಿಸಬೇಕಿದೆ. ಮನೆ ಹಾಗೂ ಅಡಿಗೆ ಮನೆಯ ಗಡಿಗಳ ಧರ್ಮತತ್ತ್ವವನ್ನು ತಾವು ಹೇಗೆ ಕಾಪಾಡಿಕೊಳ್ಳಬೇಕಾಗಿದೆ ಎಂಬುದನ್ನು ತಿಳಿಸಿಕೊಡುವುದಕ್ಕಾಗಿಯೇ ಅವರಲ್ಲಿ ರಾಜಕೀಯವಾಗಿ ಪ್ರಜ್ಞಾವಂತಿಕೆ ತರಬೇಕಾಗಿದೆ ಎಂಬ ವ್ಯಾವಹಾರಿಕ ದೂರದೃಷ್ಟಿ LETಗೆ ಇದೆ. ಮನೆಯೊಳಗಿನ ಜೀವನ ಕ್ರಮದ ಸಾಂಪ್ರದಾಯಿಕತೆಯನ್ನು ಕಾಯ್ದಿಡಲು ಮಹಿಳೆಯರು ತಮ್ಮ ಗಂಡುಮಕ್ಕಳನ್ನು ಅಂತಹ ಕಾದಾಟದ ರಣರಂಗಕ್ಕೆ ಸ್ವಯಿಚ್ಛೆಯಿಂದಲೇ ಬಿಟ್ಟುಕೊಡಲು ಪ್ರೇರಿಸುವುದೇ ಈ ತಾಯಂದಿರ ದುಃಖ ಕಥನದ ಬಹು ದೊಡ್ಡ ರಾಜಕೀಯವಾಗಿದೆ. ಈ ವಿಚಾರ ವಿರೋಧಾಭಾಸದ್ದು ಎಂಬಂತೆ ಅನ್ನಿಸಬಹುದು, ಆದರೆ ಹಾಗಿಲ್ಲ. ಅದೇ LETಯ ತತ್ತ್ವ

LET ಯ ಈ ರಾಜಕೀಯ ಅಜೆಂಡಾದ ಬಲುದೊಡ್ಡ ಚಿನ್ಹೆಗಳೆಂದರೆ ಬಂದೂಕು ಮತ್ತು ಬುರ್ಖಾ. ಬಂದೂಕು ಧಾರ್ಮಿಕ ಹೋರಾಟದ ಗುರಿಯನ್ನು ಸೂಚಿಸಿದರೆ ಬುರ್ಖಾ ಆ ಹೋರಾಟಕ್ಕೆ ಕೇಂದ್ರ ಲಕ್ಷ್ಯ ಯಾವುದು ಎಂಬುದನ್ನು ಹೇಳುತ್ತದೆ. LET ಪ್ರತಿಪಾದಿಸುವ ಪ್ರಕಾರ ಪರದೆಯ ಒಳಗಿನ ಹೆಣ್ಣಿನ ಶರೀರ ಒಂದು ಸಂಸ್ಕೃತಿಯನ್ನು, ಒಂದು ಮೌಲ್ಯವ್ಯವಸ್ಥೆಯನ್ನು, ಆದರ್ಶಪ್ರಾಯ ಇಸ್ಲಾಮಿ ರಾಜಕೀಯ ಸಂವಿಧಾನವನ್ನು ಒಳಗೊಂಡದ್ದು... ಮುಸ್ಲಿಂ ಮಹಿಳೆಯ ಪರದೆ ಮುಚ್ಚಿದ ದೇಹ ಪುನರ್ನವೀಕೃತ ಮುಸ್ಲಿಂ ಉಮ್ಮಾದ ಪಾವಿತ್ರ್ಯವನ್ನು ಇತರ ಜಗತ್ತಿಗೆ ಸಂಕೇತಿಸುತ್ತಿರುತ್ತದೆ. ಅದೇ ರೀತಿ ಅತ್ಯಾಚಾರಕ್ಕೆ ಬಲಿಯಾದ ಮುಸ್ಲಿಂ ಮಹಿಳೆಯ ಶರೀರ ಯುವ ಮುಸ್ಲಿಂರನ್ನು ಹೋರಾಟಕ್ಕೆ ಕರೆಕೊಡುವ ನಿವೇಶನವೆನಿಸುತ್ತದೆ. ಈ ತತ್ತ್ವಕ್ಕೆ ಅನುಗುಣವಾಗಿ LETಯ ಮಹಿಳೆಯರು ತಲೆಯಿಂದ ಪಾದದ ಹೆಬ್ಬೆರಳಿನವರೆಗೂ ಕಪ್ಪು ಬುರ್ಖಾ ಧರಿಸಬೇಕು. ಪಾದಗಳನ್ನು ಕಾಲುಚೀಲಗಳಿಂದ, ಹಸ್ತಗಳನ್ನು ಕೈಗವಸುಗಳಿಂದ ಮುಚ್ಚಿರಬೇಕು. ಬೇಸಿಗೆಯ ಸುಡುಬಿಸಿಲಿನಲ್ಲೂ ಈ 'ಪರದಾ'ವನ್ನು ಕೈಬಿಡುವಂತಿಲ್ಲ. LET ಮಹಿಳೆಯರ ಈ ತೀವ್ರಗಾಮಿ ಪರದಾ ವಿಧಾನವು ಅವರನ್ನು ಇತರ ಮುಸ್ಲಿಂ ಮಹಿಳೆಯರಿಗಿಂತ ಪ್ರತ್ಯೇಕವಾಗಿ ನಿಲ್ಲಿಸುವಂಥದು. ಆಸುಪಾಸಿನ ಇತರ ಮುಸ್ಲಿಂ ಮಹಿಳೆಯರು ಇದು ಧಾರ್ಮಿಕತೆಯ ಬಹಿರಂಗದ ಪ್ರದರ್ಶನವೇ ಹೊರತು ಪ್ರಾಮಾಣಿಕ ಪವಿತ್ರತೆಯ ಲಕ್ಷಣವಲ್ಲ ಎಂದು ತಿರಸ್ಕಾರದಿಂದ ಟೀಕಿಸುವುದಕ್ಕೂ LET ಮಹಿಳೆಯರ ಪರದಾ ವಿಧಾನ ಅವಕಾಶ ನೀಡುತ್ತದೆ.

ಛಾದೋರ್ ಮತ್ತು ಚಾರ್ ದೇವರಿಗಳೇ LET ಮಹಿಳೆಯರ ಬದುಕಿನ ಎಲ್ಲೆ. ಆದರೆ ವಿಶಾಲವಾದ ಜಗತ್ತಿನ ರಾಜಕೀಯದಲ್ಲಿ ಏನಾಗುತ್ತಿದೆ ಎಂಬುದನ್ನು ಅವರು ಮರೆಯಕೂಡದು. ಸಮಯಬಂದಲ್ಲಿ ರಣರಂಗವೇ ಅವರ ಮೊದಲ ಆಯ್ಕೆಯಾಗಬೇಕು ಎಂಬುದನ್ನು ಅರಿವು ಮೂಡಿಸಲು ಒಂದು ರಾಜಕೀಯ ತರಬೇತಿ ಸಮಾವೇಶದಲ್ಲಿ ಈ ಮಹಿಳೆಯರಿಗಾಗಿ ವಿಶೇಷ ವೀಡಿಯೋ ಏರ್ಪಡಿಸಲಾಗಿತ್ತು. ಲಾಹೋರಿನ ಕಾರ್ಮಿಕ ವಸತಿಗಳ ಹತ್ತಿರ ನಡೆಸಲಾದ ಈ ಕ್ಯಾಂಪ್‌ನಲ್ಲಿ ಗುಜರಾತು, ಚೆಚನ್ಯಾ ಹಾಗೂ ಇಂಡೋನೇಷಿಯಾಗಳಲ್ಲಿ ಮುಸ್ಲಿಮರ ಮೇಲೆ ನಡೆದಂಥ ಹಿಂಸಾಚಾರಗಳೇ ಎದ್ದು ತೋರುವಂಥ ಒಂದು ಕೊಲಾಜನ್ನು ಪ್ರದರ್ಶಿಸಲಾಯಿತು. ಆ ಚಿತ್ರದಲ್ಲಿ ಹಿಂಸಾಚರಣೆ, ಅಶ್ಲೀಲ ಅತಿರೇಕದ ರೀತಿಯಲ್ಲಿ ತೋರಿಸಲಾಗಿತ್ತು. ಕುತ್ತಿಗೆ ಸೀಳಿದ, ಕೈಕಾಲು ಕತ್ತರಿಸಿದ, ಸುಟ್ಟ ದೇಹಗಳ ಹಸುಳೆಗಳ ಕ್ಲೋಸಪ್ ಚಿತ್ರಗಳು, ಗೋಳಾಡುತ್ತಿರುವ ಮಹಿಳೆಯರ ಚಿತ್ರಗಳು, ಬದುಕಿಗಾಗಿ ಬೇಡಿಕೊಳ್ಳುವ ಮಕ್ಕಳ ಚಿತ್ರಗಳು ಇದ್ದ ಕೊಲಾಜ್ ಅದು LET ನೇತಾರರ ಪ್ರಕಾರ ಇಂಥ ತರಬೇತಿಗಳು ಮಹಿಳೆಯರಿಗೆ ತುಂಬ ಅವಶ್ಯಕ. ಏಕೆಂದರೆ,

"ಬಡವರೂ ಅಜ್ಞಾನಿಗಳೂ ಆಗಿರುವ ಮುಸ್ಲಿಂ ಮಹಿಳೆಯರಿಗೆ ತಮ್ಮ ಮನೆಯ ನಾಲ್ಕುಗೋಡೆಗಳ ಹೊರಗೆ ಏನಾಗುತ್ತಿದೆ ಎಂಬುದರ ಕಿಂಚಿತ್ತೂ ಅರಿವು ಇರುವುದಿಲ್ಲ".

LET ತನ್ನ ರಾಜಕೀಯ ತತ್ತ್ವಕ್ಕೆ ಅನುಗುಣವಾಗಿ ಮುಸ್ಲಿಂ ಮಹಿಳೆಯರ ನಿರ್ದಿಷ್ಟ ಆಕೃತಿಯೊಂದನ್ನು ಕೆತ್ತುತ್ತವೆ. ಈ ಮುಸ್ಲಿಂ ಮಹಿಳೆ ಸಂಬಳ ಪಡೆಯಲು ಉದ್ಯೋಗ ಕೈಗೊಳ್ಳುವುದಿಲ್ಲ. ಏಕೆಂದರೆ ಅದು ಅವಳ ಧರ್ಮ ಅವಳಿಗೆ ವಿಧಿಸಿರುವ ಕೌಟುಂಬಿಕ ಪಾತ್ರಕ್ಕೆ ವಿರುದ್ಧ. ಜಗತ್ತಿನ ಎಲ್ಲಾಕಡೆಗಳಲ್ಲಿ ಮಹಿಳೆಯರು ಉದ್ಯೋಗಸ್ಥರಾಗಿದ್ದಕ್ಕೆ ಫಲವಾಗಿ ದೊರೆತಿರುವ ಕಾಣಿಕೆ ಎಂದರೆ ವಿಚ್ಛೇದನೆ, ಲೈಂಗಿಕ ಕಿರುಕುಳ, ಒಂಟಿ ತಾಯ್ತನ ಮಾತ್ರ. LET ಮುಸ್ಲಿಂ ಮಹಿಳೆ ಸಂತಾನ ನಿಯಂತ್ರಣವನ್ನು ವಿರೋಧಿಸುತ್ತಾಳೆ. ಏಕೆಂದರೆ ಮುಸ್ಲಿಂ ಉಮ್ಮಾ ವಿಸ್ತರಿಸಬಾರದೆಂದು, ಅದರ ಸಂಖ್ಯೆಯನ್ನು ಕರಗಿಸಲಿಕ್ಕಾಗಿ ಪಾಶ್ಚಾತ್ಯ ಜಗತ್ತು ನಡೆಸುತ್ತಿರುವ ಪಿತೂರಿ ಈ ಸಂತಾನ ನಿಯಂತ್ರಣ. LET ಕೆತ್ತಿಕೊಡುವ ಮುಸ್ಲಿಂ ಹೆಣ್ಣು ತನ್ನ ಮಾತ್ಸರ್ಯವನ್ನು ನಿಯಂತ್ರಿಸಿಕೊಳ್ಳಲು ಕಲಿತು ತನ್ನ ಗಂಡನಿಗೆ ಎರಡನೆಯ, ಮೂರನೆಯ ಮದುವೆಗಳಿಗೆ ಸಮ್ಮತಿಸುತ್ತಾಳೆ. ಏಕೆಂದರೆ ಇದೇ ನಿಜವಾದ ಇಸ್ಲಾಮಿ ಜೀವನಕ್ರಮ ಎಂದು ಮಾತ್ರವಲ್ಲ, ಜಿಹಾದ್‌ನಲ್ಲಿ ಮೃತರಾದವರ ವಿಧವೆ ಪತ್ನಿಯರಿಗೂ, ಆ ಹುತಾತ್ಮರ ಅವಿವಾಹಿತ ಸೋದರಿಯರಿಗೂ ವೈವಾಹಿಕ ಜೀವನ ಸಂಗಾತಿಗಳ ಅವಶ್ಯಕತೆ ಇರುತ್ತದೆ ಎಂಬುದೂ ಮುಖ್ಯಕಾರಣ. LET ಮಹಿಳೆ ತನ್ನ ಗಂಡ, ಗಂಡುಮಕ್ಕಳು, ಸೋದರರು ತಂದೆಯರನ್ನು ಬಡ್ಡಿ ವ್ಯವಹಾರಕ್ಕೆ ತೊಡಗದಂತೆ ಆಗ್ರಹಿಸುತ್ತಾಳೆ. ಅವಳು ಸಂಗೀತ, ಟಿ.ವಿ., VCR, ಫೋಟೋಗ್ರಫಿ ಮುಂತಾದ ಇಸ್ಲಾಂನಲ್ಲಿ ಹೇಳಿಲ್ಲದ ಇತರ ಯಾವುದೇ ರೀತಿಯ ವಿಧಿ, ಆಚರಣೆಗಳಿಗೆ ತನ್ನ ಮನೆಯೊಳಗೆ ಅವಕಾಶ ಕೊಡುವುದಿಲ್ಲ. ಪಾಶ್ಚಾತ್ಯದೇಶಗಳು ಉತ್ಪಾದಿಸುವ ಫಾಸ್ಟ್‌ಫುಡ್‌ಗಳು, ತಂಪು ಪಾನೀಯಗಳನ್ನು ಎಂದೂ ಬಳಸಲು ಮನೆಯವರಿಗೆ ಆಸ್ಪದ ಕೊಡುವುದಿಲ್ಲ. ಹಾಗೆ ಬಳಸಿದರೆ ತನಗೆ ಗೊತ್ತಿಲ್ಲದೆಯೇ ಅವಳು ಯಹೂದಿ/ಕ್ರಿಶ್ಚಿಯನ್ ಬಂಡವಾಳ ಶಾಹಿಗಳಿಗೆ ಲಾಭ ಮಾಡಿಕೊಡುತ್ತಿರುತ್ತಾಳೆ. ಅವರು ಆ ಲಾಭವನ್ನು ಬಳಸುವುದು ಮುಸಲ್ಮಾನರನ್ನು ನಾಶಪಡಿಸುವಂಥ ಉದ್ದೇಶಗಳಿಗೆ. ಈ ಎಲ್ಲ ಬಗೆಯ ರಾಜಕೀಯ ವಿದ್ಯಮಾನಗಳ ಮಾಹಿತಿಗಳನ್ನು ಪಡೆದುಕೊಳ್ಳುತ್ತ, ಒಬ್ಬ ಮುಸ್ಲಿಮಳಾಗಿ ತನ್ನ ಅಸ್ಮಿತೆಯ ಅಪಹರಣ ಆಗುವುದರ ವಿರುದ್ಧ ತೆರೆದ ಕಣ್ಣಿನಿಂದ ಇರಬೇಕು. ಫ್ಯಾಷನ್, ಬಳಕೆದಾರ ಸಂಸ್ಕೃತಿ, ಸಾಮಾಜಿಕ ಸ್ಥಾನ-ಪ್ರತಿಷ್ಠೆಗಳ ಪ್ರಲೋಭನೆಗೆ ಬಲಿಬೀಳದ ಹಾಗೆ ಕಟ್ಟೆಚ್ಚರದಲ್ಲಿ LET ಮಹಿಳೆ ಬದುಕುತ್ತಾಳೆ.

ಜಿಹಾದಿ ಸಂಸ್ಕೃತಿಯ ಸ್ಪರ್ಶತಂತುವನ್ನು ಖಾಸಗಿ ಮತ್ತು ಆಪ್ತ ಜೀವನದ ವಲಯಗಳಿಗೂ ವಿಸ್ತರಿಸುವುದಕ್ಕಾಗಿ LET ತಾಯಂದಿರ ವೇದನೆಯನ್ನು ಭಾವನಾತ್ಮಕ ಪ್ರಚೋದನಾ ಅಸ್ತ್ರವನ್ನಾಗಿ ಬಳಸಿಕೊಳ್ಳುತ್ತದೆ ಎಂಬುದಕ್ಕೆ We, the Mother of Lashkar-e-Taiba ಸಂಪುಟಗಳೇ ಸ್ಪಷ್ಟ ನಿದರ್ಶನ. ಹುತಾತ್ಮಕ ತಾಯಂದಿರ ಸ್ವಾನುಭವ ಕಥನಗಳು ಒಬ್ಬ ಮುಸ್ಲಿಂ ತಾಯ್ತನದ ಅಧಿಕೃತ ಮಾದರಿಯನ್ನು ಕೆತ್ತುವುದರಲ್ಲಿ ಅಗತ್ಯವಾದ ಸಾಮಾಜಿಕ ಪಠ್ಯಗಳಾಗಿ ಕೆಲಸಮಾಡುತ್ತವೆ. ತನ್ನ ಪುತ್ರರು ಉಮ್ಮಾಗೆ ಸೇರಿದವರು ಎಂಬುದರ ತಾತ್ತ್ವಿಕತೆಯನ್ನು ಆಕೆಗೆ ಅರ್ಥ ಮಾಡಿಸುತ್ತಿರುವಾಗಲೆ ಅವಳ ಕಣ್ಣೀರು ಮತ್ತು ವ್ಯಥೆಗಳು ಆಕೆಯ ತ್ಯಾಗದ ಅಗಾಧತೆಯನ್ನು ತೆರೆದಿಡುತ್ತವೆ. "ಮಾತಿನಲ್ಲಿ ಹೇಳಲಾಗದಂಥ ತಮ್ಮ ನಷ್ಟಕ್ಕಾಗಿ ದುಃಖಿಸುವ" ತಾಯಂದಿರೆ LET ಚಳವಳಿಗೆ ಭಾವನಾತ್ಮಕ ರಕ್ತದಾನ ಮಾಡುವವರು. ತಮ್ಮ ವ್ಯಥೆಯನ್ನು ಯೋಗ್ಯ ರೀತಿಯಲ್ಲಿ ಹೋರಾಟದ ಉದ್ದೇಶಕ್ಕೆ ಹೊಂದಿಸಿ ಹೊರಗೆಡಹುವ ಮೂಲಕ ಇತರ ಮಹಿಳೆಯರನ್ನು ಇಂತಹುದೇ ಭಾವನಾತ್ಮಕ, ತ್ಯಾಗಗಳಿಗೆ ತಯಾರು ಮಾಡುವ ಸಾಧನವೂ ಆಗುತ್ತಾರೆ.

2002ನೆಯ ಇಸವಿಯಲ್ಲಿ LET ನಡೆಸಿದ ಮಹಿಳಾ ಸಮಾವೇಶದಲ್ಲಿ ತಾಯಿಯರ ಎದೆಯಾಳದ ದುಃಖದ ಗಣಿ ಅಗೆಯುವ ಇಂತಹ ಸಾಕ್ಷ್ಯಕಥನದ ಗೋಷ್ಠಿಯಲ್ಲಿ ಎಷ್ಟೋ ಮಹಿಳೆಯರು ದುಃಖ ತೋಡಿಕೊಂಡರು. ಆದರೆ ಅವರಲ್ಲಿ ಬಹುಮಂದಿ ಈಗಾಗಲೇ ಹೀಗೆ ಕಥಿಸುವುದನ್ನು ಹಲವಾರು ಸಲ ತಾಲೀಮು ಮಾಡಿ ಮಾಡಿ ವಿಷಯ, ದುಃಖವೂ ಹಳತಾಗಿದ್ದವರು. ಆದರೆ ಒಬ್ಬಾಕೆ, ಕೇವಲ ಕೆಲವೇ ದಿನಗಳ ಹಿಂದೆ ತನ 17 ವರ್ಷದ ಮಗ ಜಿಹಾದಿ ಹೋರಾಟದಲ್ಲಿ ಮೃತನಾದನೆಂಬುದನ್ನು ತಿಳಿದಿದ್ದಾಕೆ. ಆಕೆ ಹೇಳಿದ ಕಥೆ ಎಷ್ಟು ಹೊಚ್ಚಹೊಸತಾಗಿದ್ದು ಯಾವ ಪೂರ್ವತಾಲೀಮೂ ಇಲ್ಲದ ಕಚ್ಚಾತನದಿಂದ ಕೂಡಿದ್ದುದರಿಂದ ಅವಳ ಕಥನ ಪ್ರೇಕ್ಷಕರನ್ನು ಉಸಿರುಹಿಡಿದು ಆಲಿಸುವಷ್ಟು ಸೆಳೆಯಿತು. ಅಲ್ಲಿ ದುಃಖದ ಕಥೆ ಹೇಳಿಕೊಂಡ ಬಹುಪಾಲು ಮಹಿಳೆಯರು ಬಡವರು. ಹಳ್ಳಿಗಳಿಂದ, ಚಿಕ್ಕಪಟ್ಟಣಗಳಿಂದ ಸಿಂಧ್ ಮತ್ತು ಪಂಜಾಬ್ ಪ್ರಾಂತಗಳ ಕೊಳಚೆ ಪ್ರದೇಶಗಳಿಂದ ಬಂದವರೇ ಹೆಚ್ಚು. ಆದರೆ ಈ ಹೊಸಕಥನ ಕಥಿಸಿದಾಕೆ ಮಧ್ಯಮವರ್ಗದ, ಸಾಕಷ್ಟು ಆರ್ಥಿಕ ಶಕ್ತಿಯುಳ್ಳ ಮಹಿಳೆ, ಲಂಡನ್ನಿನ ಬ್ಯಾಂಕ್ ಒಂದರ ಉದ್ಯೋಗಿ.

ತನ್ನ ಮಗ ಲಂಡನ್ನಿನಲ್ಲಿ ಓದುತ್ತಿದ್ದವನು 17ನೇ ವಯಸ್ಸಿನಲ್ಲೇ LET ತರಬೇತಿಗಾಗಿ ಮನೆಬಿಟ್ಟು ಕಾಶ್ಮೀರಕ್ಕೆ ಬಂದು ತರಬೇತಿಗೆ ಸೇರಿ ಮಡಿದುಹೋದ ವಿಚಾರ ಆಕೆ ಹೇಳಿದ್ದು, ಇತರ ಮಹಿಳೆಯರಿಗೂ ವಿಶಿಷ್ಟವಾಗಿ ಕಂಡಿತ್ತು. ಹೀಗೆ ಕಡುಬಡವರಷ್ಟೇ LET ಸೇರಿರುತ್ತಾರೆಂಬ ಪ್ರತೀತಿಯನ್ನು ಸುಳ್ಳಾಗಿಸಿದ ಈಕೆಯ ಕಥನ ಆ ಸಮಾವೇಶಕ್ಕೂ ರಾಜಕೀಯವಾಗಿ ಮಹತ್ವದ್ದಾಯಿತು.

ತಾಯಿಯರ ದುಃಖ, ತಾಯಿಯರ ತ್ಯಾಗ, ಅದನ್ನು ಸ್ವಯಿಚ್ಛೆಯಿಂದ ಅವರು ಮಾಡುತ್ತಾರೆಂದು LET ಸಾಹಿತ್ಯ ಹಾಗೂ ಕಾರ್ಯಚಟುವಟಿಕೆಗಳು ಬಿಂಬಿಸುತ್ತವೆ, ನಿಜ. ಆದರೆ ಇದರ ಒಳಗಿನ ಸತ್ಯವೇನು?





ವಾರ್ಷಿಕ ಮಹಿಳಾ ಸಮ್ಮೇಳನಗಳಲ್ಲಿ ಭಾಗವಹಿಸಲಿಕ್ಕಾಗಿ ನೂರಾರು ಬಸ್ಸುಗಳನ್ನು ಬಾಡಿಗೆಗೆ ಪಡೆದು LETಯು ಹೆಣ್ಣು ಮಕ್ಕಳನ್ನು ದೂರದ ಊರು, ಹಳ್ಳಿಗಳಿಂದ ಕರೆತರುತ್ತದೆ. ಜಟ್ಟಿ ಪ್ರಯಾಣಾವಕಾಶ, ಪುಕ್ಕಟೆ ಆಹಾರ, ಮಕ್ಕಳಿಗೆ ಪುಕ್ಕಟೆ ವೈದ್ಯೋಪಚಾರದ ಅವಕಾಶ ಮುಂತಾದ ಕಾರಣಗಳು ನಿರ್ಗತಿಕ ಮಹಿಳೆಯರನ್ನು ಈ ಸಮಾವೇಶಗಳಿಗೆ ಬರುವಂತೆ ಮಾಡಿರುತ್ತವೆ. ಅವರಲ್ಲಿ ಎಷ್ಟೋ ಜನರು ಜೀವಮಾನ ವಿಡೀ ತಮ್ಮ ಹಳ್ಳಿಬಿಟ್ಟು ಹೊರಗೆ ಬಂದವರಲ್ಲ. ಮಕ್ಕಾ ಯಾತ್ರೆ ಮಾಡುವ ತಾಕತ್ತು ತಮಗೆ ಇಲ್ಲವೆಂದು ಈ ಧರ್ಮ ಸಮಾವೇಶದಲ್ಲಿ ಪ್ರಾರ್ಥನೆ ಸಲ್ಲಿಸಿ ಪುಣ್ಯ ಸಂಪಾದಿಸುವ ಆಸೆ ಕೂಡ ಕೆಲವರದು. ಇಂತಹ ಸಮಾವೇಶದಲ್ಲಿ ಊಟೋಪಚಾರ, ನೀರು, ಲೆಟ್ರಿನ್ ಮುಂತಾದವುಗಳ ನಿಗಾವಹಿಸಲು LETಯು ಯುವತಿಯರಿಗೆ ಜವಾಬ್ದಾರಿ ವಹಿಸಿರುತ್ತದೆ. ಅವರಿಗೆ ತಾವು ಜಿಹಾದ್‌ನಲ್ಲಿ ಸೇರಿರುವುದಾಗಲಿ, ಮದ್ರಸಾದಲ್ಲಿ ಶಿಕ್ಷಣ ಪಡೆಯುವದಾಗಲೀ ಮುಖ್ಯವಾಗಿರದೆ ವಿಶೇಷ ಯೂನಿಫಾರಂ ಧರಿಸಿ, ರಾಜಕೀಯಪಾತ್ರಗಳನ್ನು ತಾವೂ ನಿರ್ವಹಿಸಬಹುದು ಎಂಬುದು ಹೆಚ್ಚು ಆಸಕ್ತಿಯ ಸಂಗತಿಯಾಗಿರುತ್ತದೆ. ಸಂದರ್ಶನಗಳ ಮೂಲಕ ವಿದ್ವಾಂಸರು ಈ ವಾಸ್ತವ ಅಂಶಗಳನ್ನು ದಾಖಲಿಸಿಯೂ ಇರುತ್ತಾರೆ. ಈ ಸಮಾವೇಶದಲ್ಲಿ ಹಾಜರಾದ ಎಷ್ಟೋ ತಾಯಂದಿರು, ತಮ್ಮ ಮಕ್ಕಳನ್ನು ಬಲವಂತವಾಗಿ ನಾಯಕರು ಜಿಹಾದಿಗೆ ನೇಮಿಸಿಕೊಂಡ ಬಗ್ಗೆ ತಮ್ಮ ಅಸಹಾಯಕತೆ, ಬೇಸರ ವ್ಯಕ್ತಪಡಿಸುತ್ತಾರೆ. ಹುತಾತ್ಮರಾಗಿರದ ಮಕ್ಕಳ ತಾಯಂದಿರು ತಾವು ಬಡವರು, ಅವಿದ್ಯಾವಂತರು, ಆಡಳಿತಾಧಿಕಾರಿಗಳ ಪ್ರಭಾವ, ಸಂಬಂಧ, ಸಂಪರ್ಕಗಳಿಲ್ಲದವರೆಂದೇ ತಮ್ಮ ಮಕ್ಕಳನ್ನು ತಮಗೆ ವಿರೋಧವಿದ್ದರೂ LETಗೆ ಕರೆದೊಯ್ಯಲಾಗಿರುವುದರ ಬಗ್ಗೆ ಅಸಮಾಧಾನ ತೋಡಿಕೊಳ್ಳುತ್ತಾರೆ. ಹಾಗೆಯೇ ಹಳ್ಳಿಗಳ ಸ್ಥಿತಿವಂತರು, ಪುಡಾರಿಗಳು, ರಾಜಕಾರಣಿಗಳ ಸಂಪರ್ಕದ ಸವಲತ್ತಿರುವವರು ಕಾಶ್ಮೀರದ ಪಾಕಿಸ್ತಾನಿ ಆಕ್ರಮಿತ ಪ್ರದೇಶದ ಆಳುವ ವ್ಯವಸ್ಥೆಯೊಂದಿಗೆ ವ್ಯವಹರಿಸಿ LET ಕಪಿಮುಷ್ಟಿಯಿಂದ ತಮ್ಮ ಬಂಧುಗಳನ್ನು ಬಿಡಿಸಿಕೊಂಡು ವಾಪಸ್ಸು ಕರೆತಂದುದರ ನೂರಾರು ಘಟನೆಗಳನ್ನು ಸಂದರ್ಶನಕಾರರು ದಾಖಲಿಸಿದ್ದಾರೆ. ಅಷ್ಟೇ ಅಲ್ಲ, "ಹುತಾತ್ಮ ಪುತ್ರರು" ಎಂದು LET ಕೊಂಡಾಡುವ ಯೋಧರ ತಾಯಂದಿರು ಕೂಡ ತಮ್ಮ ಪುತ್ರರು ಜಿಹಾದಿಗೆ ಸೇರುವುದನ್ನು ತಪ್ಪಿಸಲು ತಮ್ಮ ಅನಾರೋಗ್ಯವನ್ನು ತಮ್ಮ ವೃದ್ಧಾಪ್ಯವನ್ನು, ತಮಗೆ ಜೀವನೋಪಾಯ ಬೇರೆ ಇಲ್ಲ ಎಂಬುದನ್ನು ನಾಯಕರ ಮುಂದಿಟ್ಟು ತಮ್ಮ ಮಕ್ಕಳನ್ನು ಬಿಟ್ಟು ಬಿಡುವಂತೆ ಕೋರಿದ್ದೂ ದಾಖಲಾಗಿದೆ. ಒಬ್ಬ ವೃದ್ಧ ವಿಧವೆಯು ಸಂದರ್ಶನಕಾರರಿಗೆ ಹೇಳಿದ ಈ ಮಾತುಗಳು LETಯ ವೈಯಕ್ತೀಕೃತ ಚಿತ್ರದ ಒಂದಿನ ಇನ್ನೊಂದು ಮುಖವನ್ನು ತೋರಿಸಬಲ್ಲದು: "ನನ್ನ ಗಂಡನಿಗೆ ಕಿಡ್ನಿ ತೊಂದರೆಯಿತ್ತು. ಅದರ ಚಿಕಿತ್ಸೆಗೆ ನಮ್ಮಲ್ಲಿ ಹಣವಿಲ್ಲದ್ದರಿಂದ ಅವರು ನರಳಿ ತೀರಿಕೊಂಡರು. ನನಗೆ ಎಂಟು ಜನ ಮಕ್ಕಳಿದ್ದಾರೆ. ಅವರನ್ನೆಲ್ಲ ಸಾಕಿ, ಬೆಳೆಸಲು ಬೇರೆ ಜೀವನಾಧಾರ ಏನೂ ಇಲ್ಲ. ಇರುವ ಹಿರಿಯ ಮಗನೊಬ್ಬನೇ ಈ ಬದುಕಿಗೆ ನಮಗೆ ಇರುವ ಏಕೈಕ (ದುಡಿಮೆಗಾರ) ಆಧಾರ. ಅಂಥ ಹಿರಿಯ ಮಗನನ್ನು ಈಗ LET ನೇತಾರರು ಎಲ್ಲೋ ಹೋಗಿ ಕಾದಾಡಿ ಸಾಯಲು ಬಿಟ್ಟುಕೊಡುವಂತೆ ಕೇಳಿದ್ದಾರೆ. ನನ್ನ ಮನೆಯ ಬದುಕೇ ನನಗೆ ರಣರಂಗವಾಗಿರುವಾಗ ಕಾಶ್ಮೀರದಲ್ಲಿ ಯಾವುದೋ ಧರ್ಮಯುದ್ಧ ಆದರೆ ಅದರಿಂದ ನನಗೇನಾಗಬೇಕು?"

LET ಸಂಘಟನೆಯು ಜನರನ್ನು ಅಪಘಾತ, ರೋಗ, ಮುಪ್ಪುಗಳಿಂದ ಸಾಯುವುದಕ್ಕಿಂತ ಧರ್ಮಯುದ್ಧ ಮಾಡಿ ವೀರ ಮರಣ ಹೊಂದುವುದು ಶ್ರೇಷ್ಠವಾದ ಸಾವೆಂದು ನಂಬಿಸುತ್ತದೆ. ಹದಿಹರೆಯದ ತರುಣರ ಮನಸ್ಸಿಗೆ, ತಮ್ಮ ಅಕ್ಕ ತಂಗಿಯರ ಮೇಲೆ ಅತ್ಯಾಚಾರವೆಸಗಿ ಮಾನಹಾನಿ ಮಾಡುವ ವಿಧರ್ಮೀಯರ ವಿರುದ್ಧ ಹೋರಾಡಿ ಪ್ರಾಣ ಬಿಡುವ ಈ 'ಶೌರ್ಯ'ದ ತತ್ತ್ವ ತುಂಬ ರೋಮಾಂಚನಕಾರೀ ಕಲ್ಪನೆಯಾಗಿ ಕಾಣಿಸಿದರೆ ಆಶ್ಚರ್ಯವಿಲ್ಲ. ಜಿಹಾದಿಯಾಗಿ ಸ್ವರ್ಗ ಸೇರಿದರೆ ಅಲ್ಲಿ 70 ಕನ್ಯೆಯರ ಸಹವಾಸ ದೊರೆಯುವುದೆಂಬ ಧಾರ್ಮಿಕ ಭರವಸೆ ಕೂಡ ಆ ಅಮಾಯಕ ಮನಸ್ಸುಗಳನ್ನು ಸೆಳೆಯಬಹುದು. LETಯ ಹುತಾತ್ಮರು ತಮ್ಮ ಅಂತಿಮ ಇಚ್ಛೆ ಹಾಗೂ ಘೋಷಣೆಯ ಮಾತುಗಳಲ್ಲಿ ತಮ್ಮ ತಾಯಂದಿರೆಲ್ಲ ಪರದಾ ಧರ್ಮವನ್ನು ಕಟ್ಟುನಿಟ್ಟಾಗಿ ಪಾಲಿಸಲಿ, ಜಿಹಾದ್‌ಗಾಗಿ ತಮ್ಮ ಸಮಯ ಹಾಗೂ ಸಂಪತ್ತನ್ನು ದಾನಮಾಡಲಿ, ತಮ್ಮ ಸಾವಿಗಾಗಿ ಶೋಕಿಸದಿರಲಿ. ಏಕೆಂದರೆ ತಾವು ತಮಗಾಗಿ ಸ್ವರ್ಗದ ಶಾಶ್ವತ ಜೀವನವನ್ನು ಗಳಿಸಿಕೊಂಡಿದ್ದೇವೆ. ಮುಂದೆ ಜಡ್ಜ್‌ಮೆಂಟಿನ ದಿನ ಬಂದಾಗ ತಮ್ಮ 70 ಜನ ಬಂಧು ಬಾಂಧವರ ಪರ ವಹಿಸಲು ಬೇಕಾದ ಅನುಗ್ರಹ ದೈವದಿಂದ ತಮಗೆ ಲಭಿಸಿದೆಯೆಂಬುದನ್ನು ಒತ್ತಿ ಒತ್ತಿ ಹೇಳಿರುವುದನ್ನು LET ಗ್ರಂಥಗಳು ದಾಖಲಿಸುತ್ತವೆ.

ಆದರೆ ಕಳೆದ 4–5 ವರ್ಷಗಳಲ್ಲಿ LETಯ ಮಹಿಳಾ ಶಾಖೆ ಹೆಚ್ಚು ಕಡಿಮೆ ನಿಷ್ಕ್ರಿಯವಾಗಿದೆ. ಸಾರ್ವಜನಿಕವಾಗಿ ಆಚರಿಸಿದ ಹುತಾತ್ಮರ ಬೃಹತ್ ಅಂತ್ಯಸಂಸ್ಕಾರದ ಆಚರಣೆಗಳೆಲ್ಲ ಗತಕಾಲಕ್ಕೆ ಸೇರಿಹೋಗಿವೆ. ಜಾಗತಿಕವಾಗಿ ಅಂತರರಾಷ್ಟ್ರೀಯವಾಗಿ ಪಾಕಿಸ್ತಾನದ ಮೇಲೆ ಹೆಚ್ಚುತ್ತಿರುವ ಒತ್ತಡಗಳಿಂದಾಗಿ LET ತನ್ನನ್ನು 'ಜಮಾತ್ ಉದ್ ದವಾ' ಗ್ರಂಥ ಧರ್ಮದರ್ಶಿ ಸಂಘಟನೆಯ ಹಸಿರು ಬಣ್ಣದ ಹಿಂದೆ ಅಡಗಿಕೊಂಡು ಉಳಿಯಬೇಕಾದ ಸ್ಥಿತಿ ಇದೆ. LET ನಾಯಕ 68 ವರ್ಷದ ಹಾಫಿಜ್‌ಸಯೀದ್ ಒಬ್ಬ ಹುತಾತ್ಮನ 28 ವರ್ಷದ ವಿಧವೆಯನ್ನು ವಿವಾಹವಾಗಿದ್ದು ಜಿಹಾದಿ ಸಂಬಂಧಗಳಲ್ಲಿ ಭಿನ್ನಮತವನ್ನೂ ಹುಟ್ಟಿಸಿದ ವದಂತಿಗಳಿವೆ. ಆದರೆ JUD ಹೊರತರುವ ಉರ್ದುಪತ್ರಿಕೆ 'ಘಜ್ವಾ' ಮಾತ್ರ ತಾಯಂದಿರು ಪುತ್ರರನ್ನು ಜಿಹಾದ್‌ಗಾಗಿ ದಾನಮಾಡುತ್ತಿರುವುದರ ಅಂಕಿ ಅಂಶಗಳ ಬಗ್ಗೆ ಬಡಾಯಿ ಕೊಚ್ಚಿಕೊಳ್ಳುವುದನ್ನೇ ಮುಂದುವರೆಸಿದೆ. ●

> ಇಂದಿನ ಆರ್ಥಿಕ ವ್ಯವಸ್ಥೆ ಪಲ್ಲಟಗೊಳ್ಳಲೇಬೇಕು. ರಫ್ತು ಕೇಂದ್ರಿತ ಉತ್ಪಾದನೆಯ ದಿನಗಳು ಬಹುಶಃ ಬಲುಬೇಗ ಮುಗಿಯುವುದರಲ್ಲಿದೆ. ಇದರರ್ಥ ಜಾಗತೀಕರಣವೇ ಕೊನೆಗೊಳ್ಳುತ್ತದೆ ಎಂದಲ್ಲ. ಬದಲಾಗಿ ಜಾಗತೀಕರಣದ ಆಟವೇ ಕ್ರಾಂತಿಗೊಳಗಾಗಲಿದೆ.
>
> *–ಗೀತಾ ಹರಿಹರನ್ (ಸ್ತ್ರೀವಾದಿ ಆಂಗ್ಲ ಲೇಖಕಿ ಮತ್ತು ಪತ್ರಕರ್ತೆ)*

## ಕೋಮುವಾದದ ರಾಜಕೀಯದಲ್ಲಿ

# ಸೀತೆಯರ ಸೇನೆ

**ಭಾರತದ ಸಂದರ್ಭದಲ್ಲೂ ಧರ್ಮದ ಹೆಸರಿನಲ್ಲಿ ಸ್ತ್ರೀಶಕ್ತಿಯನ್ನು ಕೋಮುವಾದಿ ಹೋರಾಟಗಳಲ್ಲಿ ಬಳಸಿಕೊಳ್ಳಲು ಅನೇಕ ಕುಟಿಲ ತಂತ್ರಗಳನ್ನು ಕೋಮುವಾದಿ ಸಂಘಟನೆಗಳು ರೂಪಿಸಿದವು. ಬಾಬರಿ ಮಸೀದಿ ಧ್ವಂಸ, ಮುಸಲ್ಮಾನರ ಮೇಲೆ ಆಕ್ರಮಣ ಮಾಡಲು ಹೊರಟ ಯುವಕರನ್ನು ಹರಸಿ, ವೀರಮರಣಕ್ಕೆ ಸನ್ನದ್ಧರಾಗಿ ಎಂದರು. ಯುದ್ಧಕ್ಕೆ ಹೊರಟ 'ವೀರಯೋಧ'ರಂತೆ ಗ್ರಹಿಸಿ ಅವರಿಗೆ ತಿಲಕವಿಟ್ಟು, ಆರತಿ ಎತ್ತಿ, ಕೈಗೆ ದಂಡ, ಕತ್ತಿ, ತ್ರಿಶೂಲಕೊಟ್ಟು ಕಳಿಸಿದ ತಾಯಂದಿರಿದ್ದರು. ಅಖಾಡಕ್ಕೇ ನೇರವಾಗಿ ಇಳಿದ 'ವೀರವನಿತೆ'ಯರೂ ಹುಟ್ಟಿಕೊಂಡರು. ನಾಡು ತಲೆಬಾಗುವಂಥ ಕೆಲಸದಲ್ಲಿ ತೊಡಗಿಕೊಂಡವರಿಗೆ ತಾವೇನು ಮಾಡುತ್ತಿದ್ದೇವೆಂಬ ಬಗ್ಗೆ ಸ್ಪಷ್ಟ ಅರಿವಿತ್ತೇ? ಅದೊಂದು ಧರ್ಮದ ಆಫೀಮಿಗೆ ಬಲಿಯಾದ ಸಮೂಹ ಸನ್ನಿಯೆ? ಮಾರ್ಚ್-ಏಪ್ರಿಲ್, 2002ರ ಮಾನಸ ವಿಶೇಷ ಸಂಚಿಕೆಯಲ್ಲಿ ಪ್ರಕಟವಾದ ಲೇಖನದ ಆಯ್ದಭಾಗ ಇಲ್ಲಿದೆ, ಗಮನಿಸಿ.**

-ಸಂ.ಮಂ.

ವಿ.ಹೆಚ್.ಪಿ. ತಾನು ನೇತೃತ್ವ ವಹಿಸಿರುವ ಚಳವಳಿಯು ಹಿಂದೂ ಸಮುದಾಯಕ್ಕೆ ಸೇರಿದ್ದು ರಾಜಕೀಯವಾಗಿ ಜಾಗೃತವಾಗಿರುವ ಒಂದು ವರ್ಗದ ಪ್ರಾತಿನಿಧಿಕ ಸಂಘಟನೆ ಮಾತ್ರವಾಗಿರದೇ ತನ್ನೊಳಗೆ ಸಮಗ್ರ ಹಿಂದೂ ಸಮುದಾಯವು ವಿಲೀನಗೊಂಡಿದೆ ಎಂದೇ ವಿ.ಹೆಚ್.ಪಿ. ಘೋಷಿಸಿತು. ಹಿಂದೂ ಸಮುದಾಯ ಹಲವು ಬಗೆಯ ವಿರಳಿತಗಳು, ಮೇಲು, ಕೀಳು ಬಹು ಸಂಸ್ಕೃತಿಗಳು ಉಳ್ಳದ್ದೆಂಬುದನ್ನು ವಿ.ಹೆಚ್.ಪಿ. ಸಾಮಾಜಿಕವಾಗಿ ಒಪ್ಪಿಕೊಂಡಿತ್ತು. ಆದರೆ ಈ ಸೀಮೆಯೊಳಗೆ ತನ್ನ 'ಕಾರ್ಯಕ್ಷೇತ್ರ ಯಾವುದೆಂಬುದನ್ನು ಅದು ಗುರುತಿಸಿಕೊಂಡಿತ್ತು. ಹಿಂದಿ ಭಾಷಿಕ ಪ್ರದೇಶದಲ್ಲಿ ಮಾತ್ರ ತನಗಿದ್ದ ಬೆಂಬಲ, ಸಹಾನುಭೂತಿಯನ್ನು ಇತರ ಪ್ರಾಂತ್ಯಗಳಿಂದಲೂ ಪಡೆದುಕೊಳ್ಳುವ ಉದ್ದೇಶ ಹೊಂದಿ ಅದು ರಾಮನನ್ನು ವ್ಯಾಪಕವಾಗಿ ಬಳಸಿಕೊಳ್ಳ ಲಾರಂಭಿಸಿತು. ಈ ಕಾರ್ಯತಂತ್ರದಿಂದಾಗಿ ಹೊಸ ಹೊಸ ಪ್ರಾಂತ್ಯಗಳಲ್ಲೂ ರಾಮನಾಮದ ಮಂತ್ರ ಪ್ರತಿಧ್ವನಿಸತೊಡಗಿತು. ಉದಾ. ಬಂಗಾಲದಲ್ಲಿ ಪ್ರಚಲಿತ ವಾಗಿರುವ ರಾಮಾಯಣದ ಕತೆಯ ಸಾರಕ್ಕು ಹಿಂದಿ ಭಾಷಿಕ ಪ್ರದೇಶಗಳಲ್ಲಿಯ ರಾಮಾಯಾಣದ ಕಥಾಸಾರಕ್ಕೂ ತುಂಬಾ ವ್ಯತ್ಯಾಸವಿದೆ. ಮೇಲಾಗಿ ಬಂಗಾಳದಲ್ಲಿ ರಾಮ ಮುಖ್ಯ ಅರಾಧ್ಯ ದೈವ ಅಲ್ಲ. ಅಲ್ಲಿ ದುರ್ಗಾ, ಕಾಳಿ ಹಾಗೂ ಕೃಷ್ಣ ಪ್ರಮುಖ ದೈವ. ಆದಾಗ್ಯೂ ವಿ.ಹೆಚ್.ಪಿ. ತನ್ನ ವಿಶಿಷ್ಟ ಕಾರ್ಯತಂತ್ರದ ಮುಖಾಂತರ ಬಂಗಾಲದಲ್ಲೂ ರಾಮನಿಗೆ ಮನ್ನಣೆಯನ್ನು ದೊರಕಿಸಿಕೊಟ್ಟಿತು. ದುರ್ಗಾ, ಕಾಳಿ, ಕೃಷ್ಣರನ್ನು ಆರಾಧಿಸುತ್ತಿದ್ದ ಸಾಮಾನ್ಯ ಹಿಂದೂ ಸಮಾಜ ಸಹಜವೆಂಬಂತೆ ರಾಮನನ್ನು ಆರಾಧ್ಯ ದೈವವಾಗಿ ಸ್ವೀಕರಿಸಿತು.

ಹಿಂದೂ ಕೋಮುವಾದಿ ಸಂಘಟನೆಗಳು ಸಮೂಹಸನ್ನಿಯನ್ನು ಸೃಷ್ಟಿಸಲು ಬಳಸಿದ ತಂತ್ರ ನಿಜಕ್ಕೂ ವಿಲಕ್ಷಣವಾಗಿದೆ. ವಿ.ಹೆಚ್.ಪಿ. ಬಳಸಿದ ಇನ್ನೊಂದು ಕುತಂತ್ರವೆಂದರೆ ಮುಸ್ಲಿಂ, ಕ್ರೈಸ್ತ ಧರ್ಮೀಯರನ್ನು ಹೊರತುಪಡಿಸಿ ಬಹುತೇಕ ಇನ್ನೆಲ್ಲ ಧರ್ಮಗಳ ಸಮುದಾಯಗಳನ್ನು ಒಂದಿಲ್ಲ ಒಂದು ರೀತಿಯಲ್ಲಿ ಸೆಳೆದುಕೊಳ್ಳುವ ಉಪಾಯ ಹೂಡಿದ್ದು. ಉತ್ತರ ಭಾರತದ ಕೆಲವುಕಡೆ ವಾಲ್ಮೀಕಿ ಮತ್ತು ರವಿದಾಸರ ಜಯಂತಿಗಳನ್ನು ಆಚರಿಸಲು ತನ್ನ ಕಾರ್ಯಕರ್ತರಿಗೆ ಸೂಚಿಸಿತು. ಇವರು ಹಿಂದೂ ಸಮಾಜದ ದಲಿತ ವರ್ಗಗಳನ್ನು ಪ್ರತಿನಿಧಿಸುವ ಧೀಮಂತರು. ಸಿಖ್ ಮತ್ತು ಬೌದ್ಧ ಧರ್ಮಗಳಿಗೆ ಸಂಬಂಧಿಸಿದಂತೆ ಕೂಡಾ ವಿ.ಹೆಚ್.ಪಿ. ಇಂಥದೇ ತಂತ್ರ ಬಳಸಿತು. ಆದರೆ ಇದರ ಗರಿಷ್ಠ ಮಟ್ಟದ ಕುಟಿಲತೆ ಎಲ್ಲಿದೆಯೆಂದರೆ ಹಿಂದೂ ಸಮಾಜದ ವ್ಯವಸ್ಥೆಯಲ್ಲಿ ಎಲ್ಲಾ ಸಮುದಾಯಗಳನ್ನು ಒಗ್ಗಟ್ಟಾಗಿಸುವಲ್ಲಿ ಪ್ರಯತ್ನಿಸಿತೇ ಹೊರತು ಈ ಸಮುದಾಯಗಳಲ್ಲಿ ಸಮಾನತೆ ಸಾಧ್ಯವಾಗಿಸುವ ಯಾವ ಪ್ರಯತ್ನಕ್ಕೂ ಅದು ಮುಂದಾಗಿರಲಿಲ್ಲ. ಎಲ್ಲ ಸಮುದಾಯಗಳು ಮುಸ್ಲಿಮರು ಮತ್ತು ಕ್ರೈಸ್ತರ ವಿರುದ್ಧ ಒಂದಾಗಿ ನಿಲ್ಲಬೇಕೆಂಬುದು ಮಾತ್ರ ವಿ.ಹೆಚ್.ಪಿ.ಯ ಗುರಿಯಾಗಿತ್ತೇ ಹೊರತು ಸಮಾಜ ವ್ಯವಸ್ಥೆಯಲ್ಲಿನ ಮೇಲು, ಕೀಳು ಅಳಿಯಬೇಕೆಂಬುದು ಅದರ ಗುರಿ ಯಾಗಿರಲಿಲ್ಲ.



ವಿ.ಹೆಚ್.ಪಿ.ಗೆ ಹಿಂದೂ ಧರ್ಮದ ಅರ್ಥಶಾಸ್ತ್ರ ಹಾಗೂ ಮನುಸ್ಮೃತಿ ಶ್ರೇಷ್ಠ ಗ್ರಂಥಗಳು. ಇವುಗಳು ಸಾರುವ ಸಂದೇಶ ಅದಕ್ಕೆ ವೇದ ಸಮಾನ. ರಾಜ್ಯಾಧಿಕಾರದ ಎದುರು ಪ್ರಜೆಗಳು ಅಣುಮಾತ್ರದವರು. ರಾಜ್ಯಹಿತಕ್ಕಾಗಿ ಸರ್ವಸ್ವದ ತ್ಯಾಗಕ್ಕೂ ಪ್ರಜೆಗಳು ಸಿದ್ಧರಾಗಿರಬೇಕು ಎಂಬ ಈ ಗ್ರಂಥಗಳ ಸಂದೇಶವನ್ನು ಅದು ಚಾಚೂ ತಪ್ಪದೇ ಎತ್ತಿ ಹಿಡಿಯ ಬಯಸುತ್ತದೆ. ಮನುಷ್ಯ ಬದುಕಿನ ಪ್ರತಿಯೊಂದು ಸಂದರ್ಭದ ಮೇಲೂ ತನ್ನ ಹದ್ದಿನ ನೋಟ ಬೀರುವುದನ್ನು ಸಮರ್ಥಿಸುವ ಈ ವ್ಯವಸ್ಥೆ ವಿ.ಹೆಚ್.ಪಿ.ಗೆ ಆದರ್ಶ! ವ್ಯವಸ್ಥೆಯನ್ನು ವಿವಿಧ ಗುಂಪುಗಳಲ್ಲಿ ವಿಂಗಡಿಸಿ ಒಂದೊಂದಕ್ಕೂ ಒಂದೊಂದು ದರ್ಜೆ, ಕೆಲಸ ಹಾಗೂ ಯೋಗ್ಯತೆಗಳನ್ನು ತಾನೇ ನಿರ್ಧರಿಸಿ ಇಂಥ ವ್ಯವಸ್ಥೆಯ ಉಸ್ತುವಾರಿ ನೋಡಿಕೊಳ್ಳುವುದು ಹೇಗೆಂದು ವಿವರಿಸುವ ಮನುಸ್ಮೃತಿ ಅದಕ್ಕೆ ಆದರ್ಶ.

ಕುಟುಂಬದೊಳಗೂ ವ್ಯಕ್ತಿಗೆ ಹೆಚ್ಚಿನ ಅಧಿಕಾರವಿಲ್ಲ. ಕುಟುಂಬದ ಹೊಣೆ ಹೊತ್ತ ಯಜಮಾನ ಕುಟುಂಬದ ಹಿತಾಸಕ್ತಿ ಯಾವುದು ಎಂದು ನಿರ್ಧರಿಸುತ್ತಾನೆ. ಅವನ ಅಪೇಕ್ಷೆ ಆಣತಿಗಳಂತೆ ನಡೆದು ಕೊಳ್ಳುವುದೇ ಆ ಕುಟುಂಬದ ಪ್ರತಿಯೊಬ್ಬ ಸದಸ್ಯರ ಪರಮ ಕರ್ತವ್ಯ.

ನಾವು ರಾಷ್ಟ್ರಸೇವಿಕಾದಳದ ಸದಸ್ಯೆಯರನ್ನು ಸಂದರ್ಶಿಸಿ, ಈ ಕುರಿತು ಅಭಿಪ್ರಾಯ ಕೇಳಿದೆವು. ಹಿಂದುತ್ವವಾದಿಗಳ ವ್ಯಾಖ್ಯಾನವನ್ನು ಅವರೂ ಪೂರ್ತಿಯಾಗಿ ಬೆಂಬಲಿಸಿದರು. ಸಂಸಾರದ ಹಿತ, ಮಕ್ಕಳ ವಿದ್ಯಾಭ್ಯಾಸ, ಉದ್ಯೋಗ, ಮದುವೆ ಇತ್ಯಾದಿ ಎಲ್ಲಾ ವಿಚಾರಗಳಲ್ಲಿ ಮನೆಯ ಯಜಮಾನರ ಅಭಿಪ್ರಾಯ ಆದೇಶಗಳನ್ನು ಮನ್ನಿಸುವುದೇ ಮನೆಮಂದಿಯ ಕರ್ತವ್ಯ ಎಂದೇ ಅವರು ಹೇಳಿದರು. ವೈಯಕ್ತಿಕ ಆಸೆ-ಅಪೇಕ್ಷೆಗಳನ್ನು ಕುಟುಂಬದ ಹಿತ (ಇದನ್ನು ಮನೆಹಿರಿಯ ಮಾತ್ರ ನಿರ್ಧರಿಸಬಲ್ಲ)ಕ್ಕಾಗಿ ತ್ಯಾಗ ಮಾಡಬೇಕೆಂದೂ ಅವರು ಅಭಿಪ್ರಾಯ ಪಟ್ಟರು.

ಆರೆಸ್ಸೆಸ್ ಮುಖಂಡ ಶೇಷಾದ್ರಿ ಮಹಿಳೆಯರು ಉದ್ಯೋಗ ಅರಸಿದಲ್ಲಿ ಸಂಸಾರಹಿತವನ್ನು ಬಲಿಗೊಟ್ಟಂತೆಯೇ ಎಂದು ಅಭಿಪ್ರಾಯ ಪಡುತ್ತಾರೆ. ಅನಿವಾಸಿ ಭಾರತೀಯ ಮಹಿಳೆಯೊಬ್ಬಳು (ಈಕೆ ವಿಎಚ್‌ಪಿ ಕಾರ್ಯಕರ್ತೆ) ಅಮೆರಿಕೆಯಲ್ಲಿನ ತನ್ನ ಬ್ಯಾಂಕ್ ಅಧಿಕಾರಿ ಕೆಲಸಕ್ಕೆ ರಾಜೀನಾಮೆ ನೀಡಿ, ಮಕ್ಕಳ ಲಾಲನೆ-ಪಾಲನೆಯನ್ನೇ ತನ್ನ ಜೀವನದ ಕರ್ತವ್ಯವನ್ನಾಗಿ ಮಾಡಿಕೊಂಡ ಪ್ರಸಂಗವೊಂದನ್ನು ಅವರು ಉತ್ತಮ ಆದರ್ಶವೆಂದು ಘೋಷಿಸಿ ಬಣ್ಣಿಸುತ್ತಾರೆ. ಅನಿವಾಸಿ ಭಾರತೀಯರ ಮಕ್ಕಳು ವಿದೇಶದಲ್ಲಿ ನೆಲೆಸಿರುವಷ್ಟು ಕಾಲ ಪಾಶ್ಚಾತ್ಯ ಚಿಂತನೆಗೆ ಮಾರು ಹೋಗದಂತೆ ತಮ್ಮನ್ನು ತಾವು ಹಗಲೂ ರಾತ್ರಿ ರಕ್ಷಿಸಿಕೊಳ್ಳಬೇಕೆಂದೂ ಅವರು ಕರೆ ಕೊಡುತ್ತಾರೆ. ಅನಿವಾಸಿ ಭಾರತೀಯ ವಧು-ವರರ ಹೊಂದಾಣಿಕೆಯ ಸಂದರ್ಭದಲ್ಲೂ ಕೂಡ ವಿ.ಹೆಚ್.ಪಿ. "ಒಂದೇ ಹಂತದ ಕುಟುಂಬಗಳಲ್ಲಿ ನಡೆಯುವ ವಿವಾಹ ಸಂಬಂಧ ಮಾತ್ರ ಶಾಶ್ವತವಾಗಿರಬಲ್ಲದು" ಎಂಬ ಅಭಿಪ್ರಾಯ ಮೂಡಿಸುವ ಮೂಲಕ ಹಿಂದೂಗಳಲ್ಲೇ ನಡೆಯಬಹುದಾದ ಒಳಜಾತಿ, ಅಂತರಜಾತಿ, ಅಂತರಭಾಷೆ, ಅಂತರರಾಜ್ಯ... ವೈವಾಹಿಕ ಸಂಬಂಧಗಳನ್ನು ಅದು ತಪ್ಪಿಸುವ ಕುತಂತ್ರವನ್ನೇ ಹೊಂದಿದೆ. 'ಒಂದೇ ಹಂತ' ಎಂಬುದನ್ನು ಅದು 'ಒಂದೇ ಆರ್ಥಿಕ ಮಟ್ಟದ' ಎಂದೂ ವ್ಯಾಖ್ಯಾನಿಸುವುದು ಸಾಧ್ಯವಿದೆ.

ಖುರ್ಜಾದಲ್ಲಿ ನಾವು ಭೇಟಿಯಾದ ಆರೆಸ್ಸೆಸ್ ಸಂಘಚಾಲಕರು, ರಾಮಾಯಣದಲ್ಲಿ ಸೀತೆಯ ಶೀಲ ಕುರಿತು ಹೇಳುವ ಸಂದರ್ಭವನ್ನು ಪ್ರಸ್ತಾಪಿಸಿದರು. ಆ ಸಂದರ್ಭದಲ್ಲಿ ತನ್ನ ಶುದ್ಧ ಚಾರಿತ್ರ್ಯ ನಿರೂಪಿಸಲು ಸೀತೆ ಅಗ್ನಿ ಪ್ರವೇಶಿಸಿದ್ದರಿಂದಲೇ ಇಂದು ಕೋಟ್ಯಂತರ ಹಿಂದೂ ಮಹಿಳೆಯರು ಆಕೆಯನ್ನು ತಮ್ಮ ಪರಮಾದರ್ಶವಾಗಿ ಭಾವಿಸುವುದು ಸಾಧ್ಯವಾಗಿದೆ ಎಂದು ಅವರು ತಮ್ಮ ತೀರ್ಪು ನೀಡಿದರು. ಹೀಗಾಗಿ ಸೀತೆಯನ್ನು ಪೂಜಿಸುವ ತಮ್ಮ ಮಹಿಳೆಯರ ಶೀಲವನ್ನು ಪ್ರಶ್ನಿಸದಿರುವುದೂ ಹಿಂದೂ ಪುರುಷರಿಗೆ ಸಾಧ್ಯವಾಗಿದೆ ಎಂಬುದನ್ನೂ ಅವರು ಸೇರಿಸಿದರು. ಆದ್ದರಿಂದ ಹಿಂದೂ ವ್ಯಾಪಾರಿ ವರ್ಗದವರು ಮನೆ ಕಡೆಯ ಚಿಂತೆ ಮರೆತು ಸಮಾಧಾನದಿಂದ ವ್ಯಾಪಾರಕ್ಕಾಗಿ ಪ್ರಯಾಣ ಬೆಳೆಸುತ್ತಾರೆ ಎಂಬುದೂ ಅವರ ವ್ಯಾಖ್ಯಾನವಾಗಿತ್ತು.

ಒಂದು ಅಭೂತಪೂರ್ವ ಹಾಗೂ ಹಿಂದುತ್ವದ ಹಿನ್ನೆಲೆಯಲ್ಲಿ ಊಹಿಸಲೂ ಸಾಧ್ಯವಾಗದ ಬದಲಾವಣೆಯೊಂದು ಕಾಣಿಸಿಕೊಂಡಿದೆ. ಹಿಂದೂ ಕೋಮುವಾದದ ಮುಂಚೂಣಿಯಲ್ಲಿ ಕ್ರೌರ್ಯರತಿಯಲ್ಲಿ ನಿರತರಾದ ಪುರುಷರ ಜೊತೆ ಉದ್ರಿಕ್ತ ಮಹಿಳೆಯೂ ಬಂದು ನಿಂತಿದ್ದಾಳೆ. ಈ ವಿಲಕ್ಷಣ ಸನ್ನಿವೇಶವು ಖುದ್ದು ಹಿಂದುತ್ವವಾದಿ ಪುರುಷರನ್ನೂ ಕಂಗೆಡಿಸಿರಲು ಸಾಕು. ಯಾಕೆಂದರೆ ರಾಷ್ಟ್ರ ಸೇವಿಕಾ ದಳದ ಕಾರ್ಯವೈಖರಿಯು ಹಿಂದುತ್ವದ ತಾಳದ ಗತಿಮೀರಿದ ವೇಗದಲ್ಲಿ ಕುಣಿಯಲಾರಂಭಿಸಿದ್ದು ಸ್ವತಃ ಹಿಂದುತ್ವವಾದಿಗಳಿಗೇ ದಿಗ್ಭ್ರಮೆ ಮೂಡಿಸಿದೆ. 1989ರಲ್ಲಿ (ಭಾಗಲ್ಪುರ) ಕೋಮುದಂಗೆ ನಡೆದಾಗ ಹಿಂದುತ್ವವಾದಿ ಮಹಿಳೆ ಮನೆ ಒಳಗೇ ಉಳಿದಿದ್ದಳು, 1991ರಲ್ಲಿ (ಅಹಮದಾಬಾದ್) ಕೋಮುದಂಗೆ ಭುಗಿಲ್ಲೆಂದಾಗ ಹಿಂದುತ್ವವಾದಿ ಮಹಿಳೆ, ತನ್ನ ಸ್ವಾತಂತ್ರ್ಯ, ಶಕ್ತಿ-ಸಾಮರ್ಥ್ಯ ಮಾರುತಿ ಕಾರ್ ಓಡಿಸುವವರೆಗೆ ಮಾತ್ರ ಎಂದು ಗುರುತಿಸಿಕೊಂಡಿದ್ದಳು. ಆದರೆ 1991ರ ಅಂತ್ಯಾರ್ಧ ಹಾಗೂ 1992ರ ಕೋಮುದಂಗೆಗಳಲ್ಲಿ ಹಿಂದುತ್ವವಾದಿ ಮಹಿಳೆ ಹಿಂದುತ್ವವಾದಿ ಪುರುಷರ ಕ್ರೌರ್ಯರತಿಯನ್ನು ಸರಿಗಟ್ಟಿದ್ದಾಳೆ. ಅದು, ಇದುವರೆಗೆ ಹಿಂದುತ್ವವಾದಿ ಪುರುಷರಿಗೂ ಕಂಡಿರದ ಹಿಂದುತ್ವವಾದಿ ಮಹಿಳೆಯ ರೂಪವಾಗಿತ್ತು.

ಹೀಗಾಗಿಯೇ ಹಿಂದುತ್ವವಾದಿ ಮಹಿಳೆಯ ಕಾರ್ಯಕ್ಷೇತ್ರವೂ ಬದಲಾಗಿದೆ; ವಿಸ್ತಾರವಾಗುತ್ತಿದೆ. ದೆಹಲಿಯ ರಾಮಕೃಷ್ಣಪುರಂ ಕಚೇರಿಯಲ್ಲಿ ಫೆಬ್ರವರಿಯಲ್ಲಿ ವಿ.ಎಚ್.ಪಿ. ಅಂಕಿ ಅಂಶಗಳು ನಮಗೆ ತಿಳಿಸಿದ ಪ್ರಕಾರ, 4 ಜನವರಿ 1992ರಂದು ಅಯೋಧ್ಯೆಯಲ್ಲಿ ಇಪ್ಪತ್ತು ಸಾವಿರ ಮಹಿಳಯರು ಬಂಧನಕ್ಕೊಳಗಾಗಿದ್ದರು. 1991ರ ಡಿಸೆಂಬರ್-1992 ಜನವರಿಯಲ್ಲಿ ನಡೆದ ಸತ್ಯಾಗ್ರಹದಲ್ಲಿ ಒಟ್ಟು ಐವತ್ತು ಸಾವಿರಕ್ಕೂ ಹೆಚ್ಚು ಮಹಿಳೆಯರು ಪಾಲುಗೊಂಡಿದ್ದರು. 15 ಡಿಸೆಂಬರ್ 1991ರ ವಿಎಚ್‌ಪಿ ಮುಖವಾಣಿ 'ಹಿಂದೂ ಚೇತನಾ' ಪಾಕ್ಷಿಕ ಪತ್ರಿಕೆಯು ಮುಖಪುಟದಲ್ಲಿ ಹಣೆಗೆ ಕೇಸರಿಬಟ್ಟೆ ಕಟ್ಟಿಕೊಂಡ ಹಿಂದುತ್ವವಾದಿ ಮಹಿಳೆಯರ ಭಾವಚಿತ್ರ ಪ್ರಕಟಿಸಿದೆ. ಅದರ ಕೆಳಗೆ ಸ್ಫೋಟಗೊಂಡ ಮಹಿಳಾಶಕ್ತಿ ಎಂಬ ಆಡಿಬರಹವನ್ನು ನೀಡಲಾಗಿದೆ. ಹಿಂದುತ್ವ ರಕ್ಷಣೆಯಲ್ಲಿ ಬಲಿದಾನ ನೀಡಿದ ಪುರುಷರ ತಾಯಿ, ಪತ್ನಿ, ಸೋದರಿ, ಮಗಳು ಹೀಗೆ ಮಹಿಳಾ ಸಂಬಂಧಿಗಳು ಅಯೋಧ್ಯೆಯ ವಿಎಚ್‌ಪಿ ಕಚೇರಿಯಲ್ಲಿ "ಹಿಂದುತ್ವದ ರಕ್ಷಣೆಗಾಗಿ ತ್ಯಾಗ ಮಾಡಿದವರ" ಪಟ್ಟಿಯಲ್ಲಿ ಸೇರುತ್ತಿದ್ದಾರೆ. ಅವರನ್ನು ಗೌರವಿಸಲಾಗುತ್ತಿದೆ; ಪೂಜಿಸಲಾಗುತ್ತಿದೆ. "ಅಮರ ಶಹೀದ್" ಪತ್ರಿಕೆ, "ಕಾಲ ಚಕ್ರ" ಹಾಗೂ "ನ್ಯೂಸ್ ಟ್ರ್ಯಾಕ್" ವಿಡಿಯೋ ಪತ್ರಿಕೆಗಳು ಹಿಂದುತ್ವವಾದಿ ಮಹಿಳೆಯರ ತ್ಯಾಗ, ಛಲ ಹಾಗೂ ಸಾಮರ್ಥ್ಯವನ್ನು ವೈಭವೀಕರಿಸಿವೆ. ದೆಹಲಿಯಲ್ಲಿ ವಿಎಚ್‌ಪಿ ಸಿಬ್ಬಂದಿ ನಮಗೆ ಬಿಜೆಪಿ ಸಂಸತ್ ಸದಸ್ಯೆ ಉಮಾ ಭಾರತಿಯ ಭಾಷಣ ಹೇಗೆ ಮೃದು ಮತ್ತು ವಿಎಚ್‌ಪಿ ಸಂನ್ಯಾಸಿನಿ ಋತಂಬರಾ ಭಾಷಣ ಹೇಗೆ ಆಕ್ರಮಣಕಾರಿಯಾಗಿದೆ ಎಂಬುದನ್ನು ಹೆಮ್ಮೆ-ಗೌರವಗಳಿಂದ ಹೇಳಿಕೊಂಡರು.

ಇದೆಲ್ಲ ದಿಢೀರನೆ ನಡೆದದ್ದಲ್ಲ. ಮಹಿಳೆಯರು ಹಾಗೂ ಪರಿಶಿಷ್ಟ ಜಾತಿಪಂಗಡಗಳ ಎರಡು ಸಮುದಾಯಗಳ ಮೇಲೆ ಬಿಜೆಪಿ ತನ್ನ ಗಮನವನ್ನು ಈಗ ಕೇಂದ್ರೀಕರಿಸಿದೆ. ಮಹಿಳೆಯರ ಮಧ್ಯೆ ಕೆಲಸ ಮಾಡಲು ಹಲವು ಪೂರ್ಣಾವಧಿ ಕಾರ್ಯಕರ್ತೆಯರು ನೇಮಕ ಗೊಂಡಿದ್ದರೆ, ಪರಿಶಿಷ್ಟ ಜಾತಿ/ಪಂಗಡಗಳಿಂದಲೇ ಕೆಲವರನ್ನು ಆಯ್ಕೆ ಮಾಡಿ, ಅವರಿಗೆ ತರಬೇತಿ ನೀಡಿ ಈ ಸಮುದಾಯಗಳ ಮಧ್ಯೆ ಬಿಜೆಪಿ ಬೀಜ ಬಿತ್ತುವ ಪ್ರಯತ್ನವೂ ನಡೆದಿದೆ. ಬಹುತೇಕ ಕೋಮು ದಂಗೆಗಳಿಂದ ಘಾಸಿಗೊಳ್ಳುವವರು ವಿಶೇಷವಾಗಿ ಮಹಿಳೆಯರು; ಹಾಗಾಗಿ ಮಹಿಳಾ ಸಮುದಾಯವು ಸಾಮಾನ್ಯವಾಗಿ ಕೋಮುದಂಗೆ ಪ್ರಚೋದಿಸುವ ಹಿಂದೂ ಹಾಗೂ ಮುಸ್ಲಿಂ ಶಕ್ತಿಗಳನ್ನು ಅದು ಖಂಡಿಸುತ್ತದೆ.

ಅಯೋಧ್ಯೆ ವಿವಾದದಲ್ಲಿ ಕರಸೇವೆ ನಡೆದಾಗ ಅಲ್ಲಿಗೆ ಹೋಗಿದ್ದ ಕರಸೇವಕಿಯರು ಸಾಂಪ್ರದಾಯಿಕವಾಗಿ ಸನಾತನವಾದಿ ವರ್ಗ ಎಂದು ಯಾವುದನ್ನು ಗುರುತಿಸಲಾಗುತ್ತದೆಯೋ, ಮುಖ್ಯವಾಗಿ ಅಲ್ಲಿಂದ ಬಂದವರು. ಅವರು ಮೇಲ್ವರ್ಗದವರಾಗಿದ್ದರು; ಮಧ್ಯಮ ದರ್ಜೆಯ ಸೇವಾಕ್ಷೇತ್ರಗಳಲ್ಲಿ ಉದ್ಯೋಗದಲ್ಲಿದ್ದವರು ಹಾಗೂ ವ್ಯಾಪಾರಿ ವೃತ್ತಿಯ ಕುಟುಂಬಗಳವರಾಗಿದ್ದರು. ಅವರನ್ನು ಹಿಂದೂ ಕೋಮುವಾದಿ ಪುರುಷರು ಸಮ್ಮೋಹನಗೊಳಿಸಿ, ತಮ್ಮ ಕಾರ್ಯಸಾಧನೆಗೆ ಕಳಿಸಿದ್ದರು ಎಂದು ನಾವು ಹುಸಿ ಸಮಾಧಾನದ ಮೊರೆ ಹೋಗುವುದೂ ತಪ್ಪಾಗುತ್ತದೆ.

ಯಾಕೆಂದರೆ ಅಯೋಧ್ಯೆಯಲ್ಲಿ ನಾವು ಕೆಲವು ಪುರುಷ ಸತ್ಯಾಗ್ರಹಿಗಳೊಂದಿಗೆ ಮಾತಾಡುತ್ತಿದ್ದಾಗ, ಅವರು ಕೆಲವು ಐತಿಹಾಸಿಕ ಹಾಗೂ ಪ್ರಾಚೀನ ಶೋಧಕ ಅಂಶಗಳನ್ನು ಪ್ರಸ್ತಾಪಿಸಿದರು. ಹಾಗೆಯೇ ಅವರು ಭಾರತ ಕುರಿತ ಆರೆಸ್ಸೆಸ್‌ನ ಅಧಿಕೃತವ್ಯಾಖ್ಯೆ "ಪಿತೃಭೂಮಿ, ಮಾತೃಭೂಮಿ, ಪುಣ್ಯಭೂಮಿ ಹಾಗೂ ಕರ್ಮಭೂಮಿ" ಎಂಬುದನ್ನು ಪುನರುಚ್ಚರಿಸಿದರು. ಆಗ ಅಲೀಗಢದಿಂದ ಬಂದಿದ್ದ ಚಂದ್ರಾವತಿ ಎಂಬ ಮಹಿಳಾ ಸತ್ಯಾಗ್ರಹಿ ಮಧ್ಯೆ ಪ್ರವೇಶಿಸಿ "(ಹೀಗೆಂದು ತಿಳಿಯದವರ) ರಕ್ತ ಹರಿಸಲು ನಾವು ಬಂದಿದ್ದೇವೆ. ಮಂದಿರ ನಿರ್ಮಾಣದ ಅರ್ಥವೆಂದರೆ ಮುಲ್ಲಾಗಳನ್ನು ಘಾಸಿ ಶಿಕ್ಷೆಗೆ ಗುರಿಪಡಿಸುವುದು; ಮೊದಲ ಘಾಸಿ ಮುಲಾಯಂ (ಸಿಂಗ್ ಯಾದವ್–ಉತ್ತರ ಪ್ರದೇಶದ ಆಗಿನ ಮುಖ್ಯಮಂತ್ರಿ) ಹಾಗೂ ವಿ.ಪಿ. (ವಿಶ್ವನಾಥ ಪ್ರತಾಪ ಸಿಂಗ್–ಭಾರತದ ಆಗಿನ ಪ್ರಧಾನಿ)" ಎಂದು ಆವೇಶಭರಿತಳಾಗಿ ಹೂಂಕಾರ ಹಾಕಿದಳು. ಅನಂತರ ನಮ್ಮ ಚರ್ಚೆಯಲ್ಲಿ ಆವೇಶದ ಹಾವಳಿಯೇ ಜಾಸ್ತಿಯಾಗಿತ್ತು.

ಮೇಲಿನ ಸಂದರ್ಭದಲ್ಲಿ ಮಹಿಳಾ ಕಾರ್ಯಕರ್ತೆ ಕೇವಲ ಆವೇಶದಿಂದ ಕಿರುಚಿದಳು ಎಂದು ತೀರ್ಮಾನಿಸಿ ಬಿಡುವುದೂ ಸರಿಯಾಗಲಾರದು. ಯಾಕೆಂದರೆ, ಆವೇಶ ಇದ್ದರೂ, ಈ ಕಾರ್ಯಕರ್ತೆಯರು ರಾಮಜನ್ಮಭೂಮಿ ವಿವಾದ ಹಾಗೂ ಹಿಂದುತ್ವ ಕುರಿತಂತೆ ನಿಖರವಾದ ಒಂದು ತಿಳಿವಳಿಕೆಯ ಹಿನ್ನೆಲೆಯಲ್ಲಿ ಒಂದು ಸ್ಪಷ್ಟ ತೀರ್ಮಾನಕ್ಕೆ ಬಂದಿದ್ದರು. ಸಂನ್ಯಾಸಿನಿ ದೀಕ್ಷೆ ತೆಗೆದುಕೊಳ್ಳಲು ನಿರ್ಧರಿಸಿದ್ದ ಗಾಜಿಯಾಬಾದ್‌ನ ವಿಜಯಾ ದುಬೆ ಎಂಬ ಮಹಿಳೆ "ಈ ಹಿಂದುಸ್ಥಾನವು ಸಮುದ್ರದ ಹಾಗೆ ಗಂಭೀರವಾದುದು, ಆಕಾಶದ ಹಾಗೆ ವಿಸ್ತಾರವಾದುದು, ಇಲ್ಲಿ ಹಿಂದೂನೇ ಆದಿ ಮತ್ತು ಹಿಂದೂನೇ ಅಂತ್ಯ" ಎಂದು ಹೇಳಿದಳು. ಹಿಂದೂ ಧರ್ಮ ಸಾರ್ವಕಾಲಿಕವಾದುದು ಎಂದೂ ಆಕೆ ಒತ್ತಿ ಹೇಳಿದಳು. ಹಿಂದೂ ಎಂಬುದು ಒಂದು ಸಮಷ್ಟಿಯ ಅಪೂರ್ವ ಅನುಭವ ಎಂದೇ ಆಕೆ ವ್ಯಾಖ್ಯಾನಿಸಿದಳು. ರಾಮಜನ್ಮಭೂಮಿ ಪ್ರಸ್ತಾಪ ಬಂದಾಗ, ಆಕೆ "ಅದು ನಮ್ಮ ಸರ್ವಸ್ವ; ಅದು ಕೇವಲ ಧಾರ್ಮಿಕ ನಂಬಿಕೆಯಲ್ಲ" ಎಂದೇ ಆಗ್ರಹಪಡಿಸಿದಳು. ಅಯೋಧ್ಯೆಯಲ್ಲಿ ರಾಮಮಂದಿರ ನಿರ್ಮಾಣವಾದರೆ "ಪೂರ್ತಿ ವಿಶ್ವವು ಬದಲಾಗುವುದು; ಹೊಸ ಸೃಷ್ಟಿಯು ಜೀವತಳೆಯುವುದು" ಎಂದು ಭರವಸೆ ನೀಡಿದಳು.



ಇನ್ನೊಬ್ಬ ಮಹಿಳೆ "(ಈ ಆಂದೋಲನವು) ನಮ್ಮ ಬದುಕಿನ ಭಾಗವಾಗಿದೆ; ಅದು ನಮಗೆ ಭೂಷಣವೂ ಹೌದು. ಕೃಷ್ಣಪರಮಾತ್ಮನಿಗೆ ಸುದರ್ಶನ ಚಕ್ರವಿದ್ದ ಹಾಗೆ" ಎಂದು ಕಾವ್ಯಮಯ ಉಪಮೆಯನ್ನೂ ನೀಡಿದಳು. ಆಗ ನಮ್ಮೊಂದಿಗೆ ಮಾತಾಡಿದ ಎಲ್ಲಾ ಮಹಿಳೆಯರು ನಿರರ್ಗಳವಾಗಿ ಮಾತಾಡಬಲ್ಲವರಾಗಿದ್ದರು; ತಮ್ಮದೇ ವಾದ ಮಂಡಿಸುತ್ತಿದ್ದರು. ಅವರ ವಾದಶೈಲಿ ಭಿನ್ನವಾಗಿತ್ತು. ಅವರೆಲ್ಲರ ತೀರ್ಮಾನಗಳೂ ಹಿಂದುತ್ವಕ್ಕೆ ಪೂರ್ಣವಾಗಿ ಬದ್ಧವಾಗಿದ್ದವು. ಈ ಮುಂಚಿನ ಕೋಮುದಂಗೆಗಳಲ್ಲಿಲ್ಲದ ಒಂದು ಅವಕಾಶವು–ತಮ್ಮಲ್ಲಿನ ರಾಜಕೀಯ ಕ್ರಿಯಾಶಕ್ತಿಯನ್ನು ವ್ಯಕ್ತಪಡಿಸುವ ಮಹಿಳೆಯರ ಸಾಮರ್ಥ್ಯ–ರಾಮಜನ್ಮಭೂಮಿ ವಿವಾದದ ಬೆಳವಣಿಗೆ ರೂಪದಲ್ಲಿ ಲಭ್ಯವಾಗಿತ್ತು.

ಈಗಿನ ಚಳವಳಿಗೂ ಹಾಗೂ ಈ ಮುಂಚಿನ ರಾಷ್ಟ್ರೀಯ ಹಾಗೂ ಕೋಮುವಾದಿ ಚಳವಳಿಗಳಿಗೂ ಇದ್ದ ಇನ್ನೊಂದು ವ್ಯತ್ಯಾಸವೆಂದರೆ ಗುರಿಯಲ್ಲಿನ ಸಾಂಕೇತಿಕತೆ. ಈ ಹಿಂದೆಲ್ಲ ಹಸು, ಒತ್ತೆಯಾಳಾಗಿದ್ದ ಹಿಂದೂ ಮಹಿಳೆ, ತಾಯ್ನಾಡು–ಹೀಗೆ ಮಹಿಳೆಯರನ್ನು ಸಂಕೇತಿಸುವಂಥದ್ದು ಗುರಿಯಾಗಿತ್ತು. ಈಗ ಪುರುಷನಾಗಿದ್ದ ರಾಮ ಕೇಂದ್ರ ಬಿಂದುವಾಗಿದ್ದ. ಶ್ರೀರಾಮನ ಕಳೆದುಹೋದ ಮರ್ಯಾದೆಯನ್ನು, ಸ್ಥಾನವನ್ನು ಹಿಂತಿರುಗಿಸಿ ಕೊಡಲು ಮಹಿಳಾಪಡೆ ಸಿದ್ಧಗೊಳ್ಳುತ್ತಿತ್ತು. ರಾಮಚಂದ್ರ ತನಗೊಂದು ನೆಲೆ ಕಂಡುಕೊಳ್ಳಲು ತನ್ನ ವಾನರಸೇನೆ ಮತ್ತು ಅಳಿಲುಗಳಿಂದ ಅಷ್ಟೇ ಅಲ್ಲದೆ ಸೀತೆಯನ್ನು ಪ್ರತಿನಿಧಿಸುವ ಸ್ತ್ರೀತ್ವದ ಸಹಾಯವನ್ನೂ ಕೇಳುವ ಸ್ಥಿತಿಯಲ್ಲಿದ್ದ. ಇಂದು ಸ್ಥಿತಿ ಹಿಂದು–ಮುಂದಾಗಿತ್ತು. ರಾಮಚಂದ್ರನಿಗೆ ಒಂದು ನೆಲೆ ಮಾಡಿಕೊಡಲು ಈಗ ಸೀತೆಯನ್ನು ಪ್ರತಿನಿಧಿಸುವ ಮಹಿಳಾ ಶಕ್ತಿ ಈಗ ಮುಂಚೂಣಿಯಲ್ಲಿ ಬಂದು ನಿಂತಿದೆ. ಹಿಂದೂ ಕೋಮುವಾದವು ಮಹಿಳಾ ಸಮುದಾಯದೊಳಗೇ ಒಂದು ಬಣವನ್ನು ತನ್ನ ಪರಂಪರಾಗತ ಲಕ್ಷ್ಮಣರೇಖೆಯನ್ನು ಉಲ್ಲಂಘಿಸುವಂತೆ ಪ್ರೇರಿಪಿಸುವಲ್ಲಿ ಯಶಸ್ವಿಯಾಗಿದೆ. ಈ ಬಣ ಈಗ ತನ್ನ ಉಗ್ರರೂಪದಲ್ಲಿ ಕ್ರಿಯಾಶೀಲವಾಗಿದೆ.

*[ಮಾರ್ಚ್–ಏಪ್ರಿಲ್ 2002ರ ಮಾನಸ ವಿಶೇಷ ಸಂಚಿಕೆಯಲ್ಲಿ ಪ್ರಕಟವಾಗಿದ್ದ ಜಿ. ರಾಜಶೇಖರ, ಕೆ. ಫಣಿರಾಜ ಮತ್ತು ಫಕೀರ್ ಮಹಮದ್ ಕಟ್ಪಾಡಿಯವರ "ಕೋಮುವಾದದ ರಾಜಕೀಯ" ಪುಸ್ತಕದ ಲೇಖನದ ಸಂಗ್ರಹ ರೂಪ.]*



# ರಂಗಭೂಮಿಗೆ ಸ್ತ್ರೀ ಪ್ರವೇಶ

## ಅಸ್ತಿತ್ವ–ಬದುಕು–ಸಾಧನೆ–ಅಭಿವ್ಯಕ್ತಿ

■ ಎನ್. ಮಂಗಳಾ

70ರ ದಶಕದ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ರಂಗಭೂಮಿಗೊಂದು ಹೊಸ ಆಯಾಮ ಬಂದಂತಾಯಿತು. ರಂಗಭೂಮಿಯ ಮೂಲಕ ರಾಜಕೀಯ ಚಿಂತನೆಯೊಂದು ಸಾಧ್ಯ ಎಂದು ನಂಬಿಕೊಂಡು ಬಂದ ಎಸ್. ಮಾಲತಿ, ಲಕ್ಷ್ಮಿ ಚಂದ್ರಶೇಖರ್ ಅವರುಗಳ ಯೋಚನಾಕ್ರಮ ಭಿನ್ನವಾಗತೊಡಗಿತು. ರಂಗಭೂಮಿ ಕೇವಲ ಮನರಂಜನೆಗಲ್ಲ, ಇವುಗಳ ಮೂಲಕ ಸಾಮಾಜಿಕ ಬದಲಾವಣೆ ಸಾಧ್ಯ ಎಂಬ ನಂಬಿಕೆಯೊಂದಿಗೆ ಸ್ತ್ರೀಪರವಾದ ಧೋರಣೆಯೊಂದು ನಿಧಾನವಾಗಿ ಬೆಳೆಯತೊಡಗಿತು. ಇದೇ ಸಂದರ್ಭದಲ್ಲಿ ಪ್ರದರ್ಶನಗೊಂಡ ಬರ್ಟೋಲ್ಡ್ ಬ್ರೆಕ್ಟ್‌ನ "ತಾಯಿ" ನಾಟಕದ ಪಾತ್ರಧಾರಿಯಾದ ಬಿ. ಜಯಶ್ರೀ ಅವರ ಮಾತು ಹೀಗಿದೆ. "ತಾಯಿ ನಾಟಕ ಮಾಡಿದ ದಿನಗಳನ್ನು ನೆನೆದರೆ ಈಗಲೂ ಅಲ್ಲಿ ಅಭಿನಯವಾಗಿ ಮೂಡಿಬಂದದ್ದು ನನ್ನ ಬದುಕಿನ ಅನೇಕ ವಾಸ್ತವಗಳು ಎಂದು ಹೇಳಬೇಕನ್ನಿಸತ್ತೆ. ಅವು ಖಾಸಗಿ ಬದುಕಿನಲ್ಲಿ ಬಹಳ ಕಷ್ಟದ ದಿನಗಳು. ಏನೇನೂ ಸಂಪಾದನೆ ಇಲ್ಲದ ದಿನಗಳು. ಎಳೆ ಮಗುವಿಗೆ ಹಾಲು ತರಲೂ ದುಡ್ಡಿರಲಿಲ್ಲ.... ತಾಯಿ ಪಾತ್ರದಲ್ಲಿ ಇಂಥ ಅನೇಕ



ನೋವುಗಳನ್ನು, ಬದುಕಿನ ಎಲ್ಲ ಸಂಕಟಗಳನ್ನೂ ತಂದಿದೀನಿ. ಅಂಥ ಸನ್ನಿವೇಶವಿದ್ದಾಗ ನಾನೇ ನನ್ನೊಳಗೆ ಬೇರೆಯಾಗಿ ಬಿಟ್ಟಿದೀನಿ..."[9] ಹೀಗೆ ಬದುಕಿನ ಅನುಭವಗಳನ್ನು ಜೀವನದ ಪ್ರತಿಬಿಂಬವೆನಿಸುವ ನಾಟಕದ ಒಳಗೆ ಅಭಿವ್ಯಕ್ತಿಸುವ ಪ್ರಜ್ಞಾಪೂರ್ವಕ ಪ್ರಯತ್ನಗಳು ಕಂಡುಬರುತ್ತವೆ.

ಇಂತಹ ಪ್ರಯೋಗಗಳ ಜೊತೆಗೆ ನಾಟಕದ ಬೇರೆ ಬೇರೆ ಪ್ರಕಾರಗಳಲ್ಲಿ ಒಂದಾದ ಬೀದಿ ನಾಟಕಗಳಿಂದ ಸಾಮಾಜಿಕ ಬದಲಾವಣೆ ಸಾಧ್ಯ ಎಂಬ ನಂಬಿಕೆ ಹೆಚ್ಚು ಹೆಚ್ಚು ಜನರಲ್ಲಿ ಮೂಡುತ್ತಿದ್ದಂತೆ ಸ್ತ್ರೀಯರ ಸಮಸ್ಯೆಗಳನ್ನು ತೆರೆದಿಡುವಂತಹ ಪ್ರಯತ್ನಗಳನ್ನು ಬೀದಿ ನಾಟಕದ ಮೂಲಕ ಮಾಡಿ ತೋರಿಸಿದರು. ವರದಕ್ಷಿಣೆ ಸಮಸ್ಯೆ, ಲಿಂಗತಾರತಮ್ಯ, ಸಹಗಮನ ಮುಂತಾದ ಸಾಮಾಜಿಕ ಸಮಸ್ಯೆಗಳ ಬಗ್ಗೆ ತಮ್ಮ ನಿಲುವನ್ನು ನಾಟಕಗಳ ಮೂಲಕ ಹೇಳುವ ಪ್ರಯತ್ನವಾಯಿತು. ಡಾ. ವಿಜಯಾ, ಎಸ್. ಮಾಲತಿಯವರು ನಾಟಕ ರಚನೆ ಮಾಡಿದರು. ಅದಾಗಲೇ ಬೀದಿರಂಗಕ್ಕಿಳಿದಿದ್ದವರ ಜೊತೆ ವನಮಾಲಾ ವಿಶ್ವನಾಥ್, ಮಾಲತಿಶರ್ಮ, ಭಾರತಿ ಮೊದಲಾದ ರಂಗದ ಮೇಲೆ ಅಭಿನಯಿಸುತ್ತಿದ್ದ ನಟಿಯರು ಬೀದಿಗಳಲ್ಲಿ ನಟಿಸುವಂತಹ ಸವಾಲುಗಳಿಗೆ ತೆರೆದುಕೊಂಡರು. ಒಂದರ್ಥದಲ್ಲಿ ರಂಗಭೂಮಿ ನಟಿಗೆ ಪ್ರತಿಭಟನೆಯ ಮಾಧ್ಯಮವಾಗಿ ನೆರವಿಗೆ ಬಂತು.

ಈ ಎಲ್ಲ ನಾಟಕಗಳ ನಿರ್ದೇಶನ ಪುರುಷರಿಂದಲೇ ನಡೆಯುತ್ತಿತ್ತು. ನಟಿಯರು ನಟನೆಗೆ ಸೀಮಿತಗೊಂಡಿದ್ದರೂ ಕೆಲವರು ನಿರ್ದೇಶನದ ಜವಾಬ್ದಾರಿಯನ್ನು ಹೊರಲು ಮುಂದೆ ಬಂದರು. ಇವರಲ್ಲಿ ಬಿ. ಜಯಶ್ರೀ ನಟಿಯಾಗಿ ನಿರ್ದೇಶಕಿಯಾಗಿ ವಿಶೇಷ ಸ್ಥಾನ ಪಡೆಯುತ್ತಾರೆ. ಅವರ ಪ್ರಕಾರ ಅವರ ಬದುಕಿನ ಎಲ್ಲ ಸಂಕಷ್ಟಗಳಿಗೂ ಹೊರದಾರಿ ಎಂದರೆ ಅವರ ಪಾತ್ರಗಳು – ಅವರ ಅಭಿನಯ ಮತ್ತು ನಿರ್ದೇಶನ. ಸ್ಪಂದನ ತಂಡ ಅವರ ಅಭಿವ್ಯಕ್ತಿಗೆ ವೇದಿಕೆಯಾಗಿ ಸಿಕ್ಕಿದೆ. ಕರಿಮಾಯಿ, ಲಕ್ಷಾಪತಿರಾಜನ ಕಥೆ, ಅಗ್ನಿಪಥ, ಚಿತ್ರಪಟ, ಜಸ್ಮಾಓಡನ್, ಘಾಸೀರಾಂ ಕೊತ್ವಾಲ್ ಮುಂತಾದ ಯಶಸ್ವೀ ಪ್ರಯೋಗಗಳನ್ನು ಬಿ. ಜಯಶ್ರೀ ನಿರ್ದೇಶಿಸಿದ್ದಾರೆ. ಅವರು ತಮ್ಮ ಅನುಭವಗಳನ್ನು ಹೀಗೆ ಹಂಚಿಕೊಳ್ಳುತ್ತಾರೆ. "ನಾನು ನಾಟಕಗಳನ್ನು ಮಾಡಿದಾಗ ಸ್ತ್ರೀದೃಷ್ಟಿಕೋನದಿಂದ ನೋಡಲು ಪ್ರಯತ್ನಿಸಿದಾಗಲೂ ನನ್ನನ್ನು ಗುರುತಿಸಿದ್ದು ಕಡಿಮೆ. ಅಗ್ನಿಪಥ, ಚಿತ್ರಪಟ ರಾಮಾಯಣ, ನಾಗಮಂಡಲ ಇವುಗಳಲ್ಲೆಲ್ಲ ವಿಶೇಷವಾದ ಒಳನೋಟಗಳಿವೆ ಎಂದು ಗುರುತಿಸಿದವರೆಷ್ಟು ಮಂದಿ? 'ನಾಗಮಂಡಲ'ದ ನಾಟಕದ ನನ್ನ ರಂಗಪ್ರಯೋಗದಲ್ಲಿ ನಾಟಕಕಾರರ ಸಾಲುಗಳಲ್ಲೇ ಇರುವ ಇನ್ನೊಂದು ಅರ್ಥವನ್ನು ರಂಗದ ಮೇಲೆ ತಂದಿದ್ದೇನೆ. ಗಂಡಸರು ಬಯಸುವ ಪಾತಿವ್ರತ್ಯ, ಏಕವ್ಯಕ್ತಿ ನಿಷ್ಠೆಗಿಂತ ಭಿನ್ನವಾದ ಅರ್ಥ ನನಗೆ ಆ ನಾಟಕದ ಸಾಲುಗಳ ನಡುವೆ ಕಂಡಿದೆ. ಎಷ್ಟು ಜನ ಇದನ್ನು ಗುರುತಿಸಿದರು ಹೇಳಿ?[10] ಜಯಶ್ರೀಯವರು ತಾವು ಅಭಿನಯಿಸುವಾಗಲೂ ಪಠ್ಯಗಳ ನಡುವೆ (between the lines) ಇರುವ ಅರ್ಥವನ್ನು ಬೇರೆ ರೀತಿಯಲ್ಲೂ ಯೋಚನೆ ಮಾಡುತ್ತಾರೆ. ಜೋಕುಮಾರಸ್ವಾಮಿಯ ಶಾರಿಯ ಪಾತ್ರ ಮಾಡುವಾಗ, ಶಾರಿ ಪಾತ್ರ ಬೇರೆ ರೀತಿಯಲ್ಲೂ ಇರಬಹುದೆಂದು ಬಹಳವಾಗಿ ಅನ್ನಿಸುತ್ತಿತ್ತಂತೆ. ಹಾಗೆಯೇ ಬ್ರೆಕ್ಟ್‌ನ

9. ಹೊಸತು ಮಾಸಪತ್ರಿಕೆ ಡಾ. ವಿಜಯಾ
10. ಹೊಸತು ಮಾಸಪತ್ರಿಕೆ ಡಾ. ವಿಜಯಾ

'ತ್ರೀ ಪೆನ್ನಿ ಅಪೇರಾ' ನಾಟಕದ ಸಂದರ್ಭದಲ್ಲಿ ಸ್ಥಳ ವೀಕ್ಷಣೆಗಾಗಿ ರೆಡ್‌ಲೈಟ್ ಏರಿಯಾಗೆ ಹೋಗಿ ಅಲ್ಲಿನ ಬದುಕನ್ನು ಕಣ್ಣಿಂದಲೇ ಗ್ರಹಿಸಿ ಬಂದಿದ್ದರು. "ನಾಟಕದ ವೇಶ್ಯಾಗೃಹದ ಮಾಲಕಿ ಜೆನ್ನಿಯದು ಅದ್ಭುತವಾದ ಪಾತ್ರ. ಅಂಥ ಒಬ್ಬ ಹೆಂಗಸು ಇದ್ದಿದ್ದರಿಂದಲೇ ಮಕ್ಕಳೂ ವೇಶ್ಯೆಯರಾಗದೆ ಉಳಿಯೋಕೆ ಸಾಧ್ಯ ಅನ್ನಿಸಿಬಿಡುತ್ತೆ. ನಾವು ಅರ್ಥ ಮಾಡಿಕೊಳ್ಳುವ ರೀತಿಯೇ ಬೇರೆ ಆಗಬೇಕು" ಎನ್ನುತ್ತಾರೆ.

ಅದೇ ರೀತಿ ಅವರು 'ಸೂರ್ಯಾಸ್ತದಿಂದ ಸೂರ್ಯೋದಯ ದವರೆಗೆ' ಎಂಬ ನಾಟಕದಲ್ಲಿ ನಪುಂಸಕ ರಾಜನೊಬ್ಬನ ರಾಣಿಯಾಗಿ ಅಭಿನಯಿಸುತ್ತಿದ್ದರು. ಸಂತಾನಪ್ರಾಪ್ತಿಗಾಗಿ ರಾಣಿ ಮತ್ತೊಬ್ಬನೊಡನೆ ಒಂದು ರಾತ್ರಿ ಕಳೆದು, ಮತ್ತೆ ರಾಜನಿಗೇ ನಿಷ್ಠಳಾಗಿ ಇರಬೇಕಾದ ಪ್ರಸಂಗದಲ್ಲಿ ರಾಜ ರಾಣಿಯರ ನಡುವೆ ಸಂಭಾಷಣೆ ಏರ್ಪಡುತ್ತದೆ. ಆಗ ರಾಜನ ಚುಚ್ಚುಮಾತುಗಳಿಗೆ ರಾಣಿಯ ದಿಟ್ಟ ನುಡಿಗಳು ಉತ್ತರವಾಗಿತ್ತು. ಹೆಣ್ಣಿನ ಅಂತರಂಗದ ಬಗ್ಗೆ, ಆಕೆಯ ಸುಖದ ಬಗ್ಗೆ, ಸ್ಪರ್ಶದ ಬಗ್ಗೆ ಮಾತನಾಡುವಾಗ ಜಯಶ್ರೀಯವರಿಗೆ ಅವರ ಬದುಕೇ ಎದುರಿಗಿತ್ತು. ಅಂದು ಅವರ ಜೀವನ ಅತ್ಯಂತ ಸಂಕೀರ್ಣದ, ಸಂಕಷ್ಟದ ಬದುಕಾಗಿತ್ತು. ಅವರು ಪಾತ್ರದೊಳಗೆ ತನ್ಮಯರಾಗಿ ಅಭಿನಯಿಸಿದ್ದರು. ಹೊಟ್ಟೆಯೊಳಗಿನ ಬೆಂಕಿ ಪಾತ್ರದ ಬೆಂಕಿಯೂ ಆಗಿ ರಂಗದ ಮೇಲೆ ಸ್ತ್ರೀಯೊಬ್ಬಳ ಒಡಲ ಜ್ವಾಲೆಯಾಗಿತ್ತು. ಆದರೆ ನಾಟಕ ನೋಡಿದ ವಿಮರ್ಶಕರು ರಂಗದ ಮೇಲೆ ವಿಪರೀತ ಅಶ್ಲೀಲ ಮಾತುಗಳು, ಈ ನಾಟಕವನ್ನು ಬ್ಯಾನ್ ಮಾಡಬೇಕು ಎಂದು ಕಠಿಣವಾಗಿ ಬರೆದಿದ್ದರಂತೆ. ನಾಟಕದೊಳಗೆ ಇರುವ ವಾಸ್ತವ ಸಂಗತಿಯನ್ನು ಒಪ್ಪಿತ ಮೌಲ್ಯಗಳಿಗೆ ಬದ್ಧರಾದೋರು ಒಪ್ಪುವುದು ಕಷ್ಟ. ಅದೂ ಹೆಣ್ಣು 'ಸುಖ'ದ ಬಗ್ಗೆ 'ಸ್ಪರ್ಶ'ದ ಬಗ್ಗೆ ಮಾತಾಡಿದರೆ! ನಾಟಕ ಜೀವನದ ಪ್ರತಿಬಿಂಬ. ನಾಟಕದೊಳಗಿನ ವಾಸ್ತವವನ್ನು ಸೃಷ್ಟಿಸಿದ ಸಮಾಜ ಅದನ್ನು ರಂಗದ ಮೇಲೆ ತಂದಾಗ ಸ್ವೀಕರಿಸುವುದು ಕಡಿಮೆ. ಹೆಣ್ಣಿನ ಹೊಟ್ಟೆಯ ಸಂಕಟ, ಹೃದಯದ ಆಕಾಂಕ್ಷೆ, ಮನಸಿನ ಕಾಮನೆಗಳು ನಟಿಯೊಬ್ಬಳ ಬಾಯಿಂದ ರಂಗದ ಮೇಲೆ ಕೇಳಿ ಬಂದರೆ ಅದಕ್ಕೆ ಮುಖಾಮುಖಿಯಾಗಿ ಕುಳಿತು ಮುಕ್ತ ಮನಸ್ಸಿನಿಂದ ಆಲಿಸುವ ವ್ಯವಧಾನ ಮತ್ತು ವಿಶಾಲಹೃದಯ ಇದೆಯೇ ಎಂಬುದು ಪ್ರಶ್ನೆ.

ಎಸ್. ಮಾಲತಿ ಸಮುದಾಯ ತಂಡ ಪ್ರಾರಂಭವಾದಾಗಿನಿಂದ ಇದ್ದವರು. ನಟಿಯಾಗಿ, ನಿರ್ದೇಶಕಿಯಾಗಿ, ನಾಟಕಕಾರ್ತಿಯಾಗಿ, ಸಮುದಾಯ ವಾರ್ತಾಪತ್ರ ಎಂಬ ರಂಗಭೂಮಿ ಪತ್ರಿಕೆಗೆ ಸಂಪಾದಕಿಯಾಗಿಯೂ ಕೆಲಸ ಮಾಡಿದ್ದಾರೆ. ನಾಟಕಗಳ ಮೂಲಕ ಸಾಮಾಜಿಕ ಕಳಕಳಿಯನ್ನು, ರಾಜಕೀಯ ನಿಲುವುಗಳನ್ನು, ಸ್ತ್ರೀಪರ ಚಿಂತನೆಗಳನ್ನು ಅಭಿವ್ಯಕ್ತಿಸುವುದು ಸಾಧ್ಯ ಎಂದು ನಂಬಿಕೊಂಡವರು. ಇವರು ನಿರ್ದೇಶಿಸಿದ ಮೀಡಿಯಾ, ಡಾಲ್ಸ್‌ಹೌಸ್ ನಾಟಕಗಳು ಗಮನಾರ್ಹ ಪ್ರದರ್ಶನಗಳಾಗಿದ್ದವು. ಅವರು ನಿರ್ದೇಶಿಸಿದ ಡಾಲ್ಸ್‌ಹೌಸ್, ಕನ್ನಡದಲ್ಲಿ 'ವಾಸಂತಿ'. ನಾಟಕದ ಅಂತ್ಯ ಬೇರೆಯೇ ಆಗಿತ್ತು. ಈ ಅಂತ್ಯ ಬಹಳಷ್ಟು ಜನರಿಗೆ ಪ್ರಶ್ನೆಗಳನ್ನು ಉಳಿಸಿತ್ತು. ಅದು ನಾಯಕಿ ಬಾಗಿಲು ಬಡಿದು ಹೊರಟು ಹೋದರೂ, ಅನಂತರದ ಸಮಸ್ಯೆಗಳು ಮೊದಲಿನದಕ್ಕಿಂತಲೂ ಭಿನ್ನವೇನಲ್ಲ ಎಂಬ ಸುಳಿವನ್ನು ಬಿಟ್ಟು ಕೊಡುತ್ತಿತ್ತು. ಆಗಷ್ಟೆ ವೈಯಕ್ತಿಕ ಬದುಕಿನಲ್ಲಿಯೂ ಬಾಗಿಲು ಬಡಿದು ಹೊರಗೆ ಬಂದಿದ್ದ ಮಾಲತಿಯವರಿಗೆ ಪಾತ್ರವನ್ನು ಗಾಢವಾಗಿ ಅಭಿವ್ಯಕ್ತಿಸುವ ತುಡಿತವಿತ್ತು.



ಪ್ರೇಮಾಕಾರಂತರು ನಟಿಯಾಗಿ, ವಸ್ತ್ರವಿನ್ಯಾಸಕಾರಳಾಗಿ, ನಿರ್ದೇಶಕಿಯಾಗಿ ಕೆಲಸ ಮಾಡಿದ್ದಾರೆ. ಇವರು ಮಕ್ಕಳ ಜೊತೆ ಮಾಡಿರುವಷ್ಟು ರಂಗಭೂಮಿಯ ಕೆಲಸ ಮತ್ತ್ಯಾರೂ ಮಾಡಿಲ್ಲ. ಸತತವಾಗಿ ಪ್ರಾರಂಭದಿಂದಲೂ ಮಕ್ಕಳೊಟ್ಟಿಗೆ ದುಡಿದಿದ್ದಾರೆ. ಮಕ್ಕಳ ರಂಗಭೂಮಿಗೆ ಯಾವತ್ತೂ ಸಿಗಬೇಕಾದಷ್ಟು ಮಾನ್ಯತೆ ಸಿಕ್ಕಿಲ್ಲ ಎಂದು ಹೋರಾಡುತ್ತಲೇ ರಂಗಭೂಮಿಗೆ ಸಾವಿರಾರು ಮಕ್ಕಳನ್ನು ನೀಡಿದ್ದಾರೆ. ಸತತವಾಗಿ ನಲವತ್ತು ವರ್ಷಗಳಿಂದಲೂ ರಂಗಭೂಮಿಯಲ್ಲಿ ಕೆಲಸ ಮಾಡಿದ ಹಿರಿಯ ಕಲಾವಿದೆ. ಜೊತೆಯಲ್ಲೇ ಇವರು ಸ್ತ್ರೀಕೇಂದ್ರಿತ ವಸ್ತುಗಳನ್ನು ಹೊಂದಿದ 'ಫಣಿಯಮ್ಮ' ಮತ್ತು ಹಿಂದಿಯಲ್ಲಿ 'ಬಂದ್ ಝುರೋಕೆ' ಚಿತ್ರಗಳನ್ನೂ ನಿರ್ದೇಶಿಸಿದರು. ಇವು ಹೆಣ್ಣೊಬ್ಬಳ ದಾಂಪತ್ಯದ, ಲೈಂಗಿಕ ಸಿಕ್ಕುಗಳು ಮತ್ತು ಕ್ರೌರ್ಯಗಳ ಕಡೆ ಗಮನ ಚೆಲ್ಲುತ್ತವೆ.

ಮಹಿಳೆಯರೂ ರಂಗಶಿಕ್ಷಣ ಪಡೆಯತೊಡಗಿದ ನಂತರ ರಂಗಭೂಮಿಯನ್ನು ಅವರು ನೋಡುವ ದೃಷ್ಟಿಯೂ ಬದಲಾಯಿತು. ರಂಗಭೂಮಿಯನ್ನು ವೃತ್ತಿಯನ್ನಾಗಿ ಸ್ವೀಕರಿಸುವ ಮೂಲಕ ಧೈರ್ಯ ತೋರಿದರು. ರಂಗಭೂಮಿಯ ಎಲ್ಲ ಕ್ಷೇತ್ರಗಳ ಕಡೆಗೂ ಗಮನ ಕೊಡುವಂತಾದರು. ಸಮರ್ಥ ಅಭಿನೇತ್ರಿಯ ರೆನಿಸಿಕೊಂಡರೂ ತಾವು ಮಾಡಿದ ಪಾತ್ರಗಳ ಏಕತಾನತೆಯ ಬಗ್ಗೆ ಬೇಸರಗೊಂಡರು. ಹೆಚ್ಚು ನಾಟಕಗಳು ಪುರುಷಕೇಂದ್ರಿತವಾಗಿದ್ದು, ಅಲ್ಲಿನ ಸ್ತ್ರೀಪಾತ್ರಗಳು ಉಪ್ಪಿಟ್ಟು, ಕಾಫಿ ಕೊಡುವಂತಹ ಪಾತ್ರಗಳಾದಾಗ, ಅದೇ ಅದೇ ಮಾದರಿಯ ಪಾತ್ರಗಳನ್ನು ಮಾಡುವುದಕ್ಕೆ ಬೇಸರ ಬಂದಂತಾಗಿ, ಸ್ತ್ರೀಕೇಂದ್ರಿತ ಮುಖ್ಯ ಪಾತ್ರಗಳಲ್ಲಿ ಅಭಿನಯಿಸುವ ಅವಕಾಶಗಳು ಎಲ್ಲರಿಗೂ ಸಿಗದೆ ಇದ್ದ ಕಾರಣ ಬೇರೆ ಬೇರೆ ಥರದ ಪಾತ್ರಗಳಿಗಾಗಿ ಹುಡುಕಾಡಿದರು. ಇದೇ ಸಂದರ್ಭಕ್ಕೆ ಸರಿಯಾಗಿ ಟಿ.ವಿ.ಯ ಜನಪ್ರಿಯತೆ ಹೆಚ್ಚಾಗಿ ಎಲ್ಲರೂ



ಟಿ.ವಿ.ಗಳಲ್ಲಿ ಅಭಿನಯಿಸಲು ವಲಸೆ ಹೋದರು. ನಾಟಕಗಳ ತಾಲೀಮಿಗೆ ಶಿಸ್ತುಬದ್ಧವಾಗಿ ಹಾಜರಾಗಲು ಸಾಧ್ಯವಾಗದೆ, ಟಿ.ವಿ. ಮಾಧ್ಯಮದಲ್ಲೂ ಉತ್ತಮ ಪಾತ್ರಗಳ ಸೃಷ್ಟಿ ಇಲ್ಲದೆ ಉತ್ತಮ ಪಾತ್ರಗಳಿಗಾಗಿ ಹಾತೊರೆದರು. ಈ ಸಂದರ್ಭದಲ್ಲಿ ಹುಟ್ಟಿದ್ದೇ ಏಕವ್ಯಕ್ತಿ ಪ್ರದರ್ಶನ. ತಾನೇ ಕೇಂದ್ರವ್ಯಕ್ತಿಯಾಗಿ ತನ್ನ ಸುತ್ತಲೂ ತನಗೆ ಬೇಕಾದ ಹಾಗೆ ಪರಿಸರವನ್ನು ಸೃಷ್ಟಿಸಿಕೊಂಡು ತನ್ನ ಸಮಸ್ಯೆಯ ಬಗ್ಗೆ ತನ್ನದೇ ಮಾತುಗಳಲ್ಲಿ ಅಭಿವ್ಯಕ್ತಿಸುವ ಸವಾಲನ್ನು ಮಹಿಳೆ ಸಂತೋಷದಿಂದ ಬರಮಾಡಿಕೊಂಡಳು. ನಟಿಯಾಗಿ, ಹೆಣ್ಣಾಗಿ, ಮಹಿಳಾ ಚಳವಳಿಯ ಕಾರ್ಯಕರ್ತೆಯಾಗಿ, ಸಾಮಾಜಿಕ ಬದಲಾವಣೆ ನಾಟಕಗಳಿಂದಲೂ ಸಾಧ್ಯ ಎಂಬ ನಂಬಿಕೆ ಉಳ್ಳವರಾಗಿ, ತನ್ನ ಅಭಿವ್ಯಕ್ತಿಯ ಮಾಧ್ಯಮ ರಂಗಭೂಮಿ ಎಂದು ಅರ್ಥೈಸಿಕೊಂಡಿರುವ ಲಕ್ಷ್ಮಿ ಚಂದ್ರಶೇಖರ ಬಹಳಷ್ಟು ಏಕವ್ಯಕ್ತಿ ಪ್ರದರ್ಶನಗಳನ್ನು ನೀಡಿದ್ದಾರೆ. ಮೊಟ್ಟ ಮೊದಲಿಗೆ ಕರ್ನಾಟಕದಲ್ಲಿ ತನ್ನನ್ನು ಪ್ರಯೋಗಕ್ಕೆ ಒಡ್ಡಿಕೊಳ್ಳುವ ಸಲುವಾಗಿ ಶಕುಂತಲೆ ಮತ್ತು ಗಾಂಧಾರಿ ಪಾತ್ರಗಳನ್ನು ಇಟ್ಟುಕೊಂಡು ಏಕವ್ಯಕ್ತಿ ಪ್ರದರ್ಶನ ನೀಡಿದವರು ಈಗ ಅಸ್ಸಾಂನಲ್ಲಿರುವ ಭಾಗೀರಥಿಬಾಯಿ ಕದಂ. ಲಕ್ಷ್ಮಿಯವರು 'ಹೆಣ್ಣಲ್ಲವೇ?' 'ಸಿಂಗಾರೆವ್ವ', 'ಎದ್ದೇಳು' ಮತ್ತು 'ಮೀಡಿಯಾ' ಎಂಬ ನಾಲ್ಕು ಏಕವ್ಯಕ್ತಿ ಪ್ರದರ್ಶನಗಳನ್ನು ತನ್ನ ನಿರ್ದೇಶಕಿ ಸೌಮ್ಯ ವರ್ಮರೊಂದಿಗೆ ಸಿದ್ಧಪಡಿಸಿಕೊಂಡು ಪ್ರದರ್ಶನಗಳನ್ನು ನೀಡುತ್ತಿದ್ದಾರೆ. ಬಿ. ಜಯಶ್ರೀಯವರು 'ಉರಿಯ ಉಯ್ಯಾಲೆ' ಮತ್ತು 'ಕೈಕೇಯಿ' ಎಂಬ ಎರಡು ಪ್ರಯೋಗಗಳನ್ನು ನೀಡಿದ್ದಾರೆ. ರಂಗಾಯಣದ ಶಶಿಕಲಾ, ಅರುಂಧತಿರಾವ್, ಮಂಗಳಾ, ಮಂಜುಳಾ, ಸೀತಾಕೋಟೆ ಎಲ್ಲರೂ ಈ ಹೊಸ ಪ್ರಕಾರದಲ್ಲಿ ಪ್ರಯೋಗಗಳನ್ನು ನಡೆಸಿದ್ದಾರೆ. ಈ ಪ್ರಯತ್ನವನ್ನು ತನ್ನೆಲ್ಲ ಮಿತಿಗಳೊಂದಿಗೆ ಒಂದು ಪ್ರಯೋಗ ಎಂದು ಕರೆಯಬಹುದಾದರೂ ಇವತ್ತಿನ ಮಹಿಳೆಗೆ ರಂಗಭೂಮಿಯಲ್ಲಿ ಎದುರಿಸಬೇಕಾಗಿರುವ ಸವಾಲುಗಳು ಇನ್ನೂ ಬಹಳಷ್ಟಿವೆ.

ಇನ್ನು ಕರ್ನಾಟಕದ ರೆಪರ್ಟರಿಗಳಾದ ರಂಗಾಯಣ, ನೀನಾಸಂ, ಶಿವಸಂಚಾರಗಳಲ್ಲಿ ಕಲಾವಿದೆಯರು ರಂಗಭೂಮಿಯನ್ನು ವೃತ್ತಿಯನ್ನಾಗಿ ಸ್ವೀಕರಿಸಿ ಕೆಲಸ ಮಾಡುತ್ತಿದ್ದಾರೆ. ನೀನಾಸಂ, ಶಿವ ಸಂಚಾರಗಳಲ್ಲಿ ಕಲಾವಿದೆಯರು ವರ್ಷದಿಂದ ವರ್ಷಕ್ಕೆ ಬದಲಾಗುತ್ತಾ ಹೋಗುತ್ತಾರೆ. ಆದರೆ ರಂಗಾಯಣದಲ್ಲಿ 18 ವರ್ಷಗಳಿಂದಲೂ ಸತತವಾಗಿ ಕೆಲಸ ಮಾಡುತ್ತಿರುವ ಪ್ರಮೀಳಾ ಬೇಂಗ್ರೆ, ಸರೋಜ ಹೆಗ್ಗಡೆ, ಗೀತಾ ಮೊಂಟೋಡ್ಕಾ ನಂದಿನಿ, ಶಶಿಕಲಾ ಮೊದಲಾದವರು ರಂಗಭೂಮಿಗೆ ಮಹತ್ತರವಾದ ಕೊಡುಗೆಯನ್ನು ನೀಡಿದ್ದಾರೆ. ಅಭಿನಯದಲ್ಲೇ ಶ್ರೇಷ್ಠತೆಯನ್ನು ಸಾಧಿಸುತ್ತಿರುವ ಈ ಕಲಾವಿದೆಯರು ವೈವಿಧ್ಯಮಯ ಸ್ತ್ರೀ ಕೇಂದ್ರಿತ ನಾಟಕಗಳನ್ನು, ಪಾತ್ರಗಳನ್ನು ಪ್ರಯೋಗ ಮಾಡಿದ್ದಾರೆ. ಈ ಕಲಾವಿದೆಯರು ನಟನೆಯ ಜೊತೆಯಲ್ಲೆ ರಂಗವಿನ್ಯಾಸ, ವಸ್ತ್ರವಿನ್ಯಾಸ, ಪರಿಕರ, ಪ್ರಸಾಧನ, ಬೆಳಕು, ಪ್ರಚಾರ ಮತ್ತು ಸಂಘಟನೆ ಮುಂತಾದ ಎಲ್ಲ ಜವಾಬ್ದಾರಿಗಳನ್ನೂ ಹೊತ್ತು ಕೆಲಸ ಮಾಡುತ್ತಿದ್ದಾರೆ. ಕಲಾವಿದೆಯರೆಂದು ಯಾವ ಸೋಡಿಯನ್ನೂ ಅಪೇಕ್ಷಿಸದೆ ತಮ್ಮ ಸಹ ನಟರ ಜೊತೆಯಲ್ಲಿ ಸಮಸಮಕ್ಕೂ ದುಡಿಯುತ್ತಿದ್ದಾರೆ. ರಂಗಾಯಣದ ಪ್ರಾರಂಭದ ವರ್ಷಗಳಲ್ಲಿ ಏಣಿ ಹತ್ತಿ ಲೈಟ್ ಕಟ್ಟಿದ್ದಾರೆ, ಪರದೆ ಕಟ್ಟಿದ್ದಾರೆ, ಭಾರದ ಡಯಾಸ್‌ಗಳನ್ನು ಜಾಗದಿಂದ ಜಾಗಕ್ಕೆ ಸಾಗಿಸಿದ್ದಾರೆ. ವಸ್ತ್ರಗಳು ತುಂಬಿದ ಟ್ರಂಕ್‌ಗಳನ್ನು ಲಾರಿಗೆ ಲೋಡ್ ಮಾಡುವುದಾಗಲೀ, ಅನ್‌ಲೋಡ್ ಮಾಡುವುದಾಗಲೀ, ರೈಲ್ವೆ ಸ್ಟೇಷನ್‌ಗಳಲ್ಲಿ ಹೊತ್ತು ಸಾಗಿಸುವುದಾಗಲೀ ಯಾವ ಕೆಲಸಕ್ಕೂ ಹಿಂದೆ ಬಿದ್ದಿಲ್ಲ. ಸಂಸಾರವಂದಿಗರಾದ ಮೇಲೂ ಮಕ್ಕಳನ್ನೂ ಜೊತೆಯಲ್ಲೇ ಎಳೆದಾಡಿಕೊಂಡು ಟೂರ್‌ಗಳನ್ನು ಮಾಡಿದ್ದಾರೆ. ರಂಗಭೂಮಿಯ ಎಲ್ಲ ಕೆಲಸಗಳನ್ನೂ ಸಮಾನ ಜವಾಬ್ದಾರಿಗಳೊಂದಿಗೆ ಹಂಚಿಕೊಂಡು ಇಂದಿಗೂ ಕೆಲಸ ಮಾಡುತ್ತಿದ್ದಾರೆ. ನಾಟಕಗಳನ್ನೂ ಬರೆದಿದ್ದಾರೆ. ನಿರ್ದೇಶನವನ್ನೂ ಮಾಡುತ್ತಿದ್ದಾರೆ. ಪಾತ್ರ ಕಟ್ಟುವ ಸಂದರ್ಭದಲ್ಲಿ ನಿರ್ದೇಶಕರ ಜೊತೆ ಪಾತ್ರಕ್ಕೆ ನ್ಯಾಯ ಸಿಕ್ಕುವ ಹಾಗೆ ಚರ್ಚಿಸುವ, ಅನುಮಾನಗಳನ್ನು, ಅಸಮಾಧಾನಗಳನ್ನು ವ್ಯಕ್ತಪಡಿಸುವ, ಪಠ್ಯಗಳ ನಡುವೆ (between the lines) ಹೆಚ್ಚು ಹೆಚ್ಚು ಕೆಲಸ ಮಾಡುವ ಸ್ವಾತಂತ್ರ್ಯವನ್ನು ತೆಗೆದುಕೊಳ್ಳುತ್ತಾರೆ. ನಟನಟಿಯರೆಂದರೆ ನಿರ್ದೇಶಕರ ಗೊಂಬೆಗಳಾಗಬೇಕಿಲ್ಲ. ನಿರ್ದೇಶಕನ ಆಶಯವನ್ನು ಅರ್ಥಮಾಡಿಕೊಂಡು, ಪಾತ್ರಗಳಿಗೆ ಚ್ಯುತಿ ಬಾರದ ಹಾಗೆ ನಿರ್ದೇಶಕ ಮತ್ತು ನಟನಟಿಯರು ಸತ್ಯವನ್ನು ಹುಡುಕುವ ಪ್ರಕ್ರಿಯೆಯೇ ನಾಟಕ ಕಟ್ಟುವ ರೀತಿ ಎಂಬುದನ್ನು ಮನಗಂಡಿದ್ದಾರೆ. ಹೀಗೆ ಕಂಡ ಸತ್ಯವನ್ನು ಪ್ರೇಕ್ಷಕನಿಗೆ ಮುಟ್ಟಿಸಬೇಕಾದ ಸವಾಲನ್ನು ಎದುರುಗಿಟ್ಟು ಕೊಂಡೇ ಕೆಲಸ ಮಾಡುತ್ತಿದ್ದಾರೆ.

ಇಷ್ಟೆಲ್ಲ ಪ್ರಯತ್ನಗಳ ಮಧ್ಯೆಯೂ ನಮಗೆ ನಮ್ಮದೇ ಆದ ಸವಾಲುಗಳಿವೆ, ತೊಡಕುಗಳಿವೆ. ನಮ್ಮ ಅಭಿವ್ಯಕ್ತಿ ನಮ್ಮ ದೇಹ, ಮಾತು, ಮನಸ್ಸು, ಉಡುಗೆ, ತೊಡುಗೆ ಎಲ್ಲದರ ಮೇಲೆ ನಿಂತಿರುತ್ತದೆ. ಅಭಿನೇತ್ರಿಯ ಅಭಿವ್ಯಕ್ತಿ ಶಬ್ದಗಳಲ್ಲಿ ಹಿಡಿದಿಟ್ಟು ಅಕ್ಷರಗಳ ಮಾಲೆ



ಪೋಣಿಸುವುದಲ್ಲ, ಹಾಳೆಯ ಮೇಲೆ ಬಣ್ಣಗಳ ಓಕುಳಿ ಆಡುವುದಲ್ಲ, ಅಥವಾ ಕೈಗೆ ಸಿಕ್ಕಿದ್ದನ್ನು ಕೆತ್ತಿ ಕೆತ್ತಿ ಇಡುವುದೂ ಅಲ್ಲ. ನಾವಲ್ಲದ ಪಾತ್ರಗಳೊಳಗೆ ನಮ್ಮ ಮುಂದಿರುವ ನೂರಾರು ಪ್ರೇಕ್ಷಕರೆದುರು ಆ ಕ್ಷಣ ಬದುಕುವುದು. ನಿರ್ದಿಷ್ಟ ಕಾಲದೊಳಗೆ, ನಿರ್ದಿಷ್ಟ ಮಾತುಗಳ ಜೊತೆಯಲ್ಲಿ, ಬದುಕುತ್ತಾ ಅದನ್ನು ಪ್ರೇಕ್ಷಕರೆದುರು ಅಭಿವ್ಯಕ್ತಿಸುವುದು. ನಮ್ಮ ಸಂಸ್ಕಾರಗಳ ಜೊತೆ ಎದುರಿಗೆ ಕುಳಿತಿರುವವರ ಸಂಸ್ಕಾರವೂ ಮುಖ್ಯವಾಗುತ್ತದೆ. ಅವರಿಗೂ ಆಪ್ತವೆನಿಸುವ ಹಾಗೆ ಸತ್ಯವನ್ನು ತೆರೆದಿಡುತ್ತಾ ಬದುಕ ಬೇಕಾದ ಜವಾಬ್ದಾರಿ ಅಭಿನಯಿಸುವವರ ಮೇಲಿರುತ್ತದೆ. ಅವರು ಒಪ್ಪದ ಮೌಲ್ಯಗಳನ್ನು ಅಭಿವ್ಯಕ್ತಿಸಲು ತೊಡಗುವಾಗ ಕಪಾಳಕ್ಕೆ ಹೊಡೆದಂತೆ ಎದ್ದು ಹೋಗುವ ಸ್ವಾತಂತ್ರ್ಯ ಪ್ರೇಕ್ಷಕರಿಗಿರುತ್ತದೆ. ಇಷ್ಟವಿಲ್ಲದ್ದಕ್ಕೆ ಲೊಚಗುಟ್ಟಿ ಇರುಸುಮುರುಸುಗೊಂಡು ರಂಗದ ಮೇಲಿರುವವರಿಗೆ ಅದನ್ನು ತಲುಪಿಸಿಯೂ ಬಿಡುವ ಸ್ವಾತಂತ್ರ್ಯವನ್ನು ಅವರು ಹೊಂದಿರುತ್ತಾರೆ. ರಂಗದ ಮೇಲಿನ ಕೆಲವು ಗಂಟೆಗಳ ಬದುಕು ಬೆಂಕಿಯ ಬದುಕು. ತಿರಸ್ಕಾರ, ಪುರಸ್ಕಾರ, ಸಂತೋಷ, ಅಪ್ಪುಗೆ, ಪ್ರೀತಿ, ಗೋಣಗಾಟ ಎಲ್ಲವೂ ಕ್ಷಣಕ್ಷಣವೂ ವ್ಯಕ್ತವಾಗಿ ಬಿಡುವಂಥ ಪ್ರಕಾರ ನಾಟಕ. ಹಾಗಾಗಿ ಎಷ್ಟೋ ಕಾಲ ಅಭಿವ್ಯಕ್ತಿಯ ಪ್ರಕ್ರಿಯೆಯಲ್ಲಿ ತೊಡಕುಗಳು ಇದ್ದೇ ಇರುತ್ತವೆ. ಪ್ರೇಕ್ಷಕನ ನಾಡಿ ಹಿಡಿದೇ ಕಲಾವಿದರು ಅಭಿನಯಿಸಬೇಕಾದ ಅನಿವಾರ್ಯತೆ ಇದೆ. ರಂಗದ ಮೇಲಿನ ಅಭಿವ್ಯಕ್ತಿ ಪ್ರೇಕ್ಷಕರ ಪ್ರತಿಕ್ರಿಯೆಯ ಮೇಲೆ ನಿಂತಿರುತ್ತದೆ. ಪ್ರದರ್ಶನದಿಂದ ಪ್ರದರ್ಶನಕ್ಕೆ ಪ್ರೇಕ್ಷಕರು ಬದಲಾಗುವುದರಿಂದ ಪ್ರತಿ ಪ್ರದರ್ಶನವೂ ಹೊಸ ಅನುಭವವೇ. ಎಷ್ಟೇ ಒಳ್ಳೆಯ ನಾಟಕವಿರಬಹುದು, ಎಷ್ಟೇ ಒಳ್ಳೆಯ ನಿರ್ದೇಶನವಿರಬಹುದು, ಅಭಿನಯವಿರಬಹುದು, ತಾಂತ್ರಿಕವಾಗಿ ಅದ್ಭುತವಾಗಿರ ಬಹುದು, ಆದರೆ ಅವೆಲ್ಲವೂ ಪ್ರೇಕ್ಷಕನಿಂದ ಒಪ್ಪಿತವಾದರೆ ಮಾತ್ರ, ಪ್ರೇಕ್ಷಕ ಒಪ್ಪಲಿಲ್ಲ ಎಂದರೆ ಎಷ್ಟೇ ಅದ್ಭುತ ಅಭಿವ್ಯಕ್ತಿಯಾದರೂ ನಾಟಕ ಸತ್ತಂತೆಯೇ. ನಾಟಕ ಪ್ರತಿದಿನ ಹುಟ್ಟಿ ಅಲ್ಲಿಯೇ ಮುಗಿಯುವಂಥದ್ದು, ದಾಖಲೆಗೆ ಸಿಗುವಂಥದ್ದಲ್ಲ. ಮತ್ತೆ ಅದನ್ನು ನೋಡಬೇಕೆಂದರೆ ಮರುಪ್ರದರ್ಶನವಾಗಲೇ ಬೇಕು. ಆ ಪ್ರದರ್ಶನ ಮೊದಲಿನಂತೆಯೇ ಇರಬೇಕೆಂದೇನಿಲ್ಲ. ಪ್ರದರ್ಶನದಿಂದ ಪ್ರದರ್ಶನಕ್ಕೆ ಅದು ಬೆಳೆಯುತ್ತಲೂ ಹೋಗಬಹುದು. ಹಾಳಾಗುತ್ತಲೂ ಹೋಗಬಹುದು. ಇದು ರಂಗಭೂಮಿಗಿರುವ ಶಕ್ತಿಯೂ ಹೌದು, ಮಿತಿಯೂ ಹೌದು.





ಇಂಥ ಪರಿಸ್ಥಿತಿಯಲ್ಲಿ ಮಹಿಳೆಯ ಹೊಸ ಪ್ರಯೋಗ, ಸಾಧನೆ, ಹೊಸ ದೃಷ್ಟಿಕೋನ, ಹೊಸ ಅಭಿವ್ಯಕ್ತಿ ಇವುಗಳನ್ನು ಎಷ್ಟೋ ಸಲ ಪ್ರೇಕ್ಷಕ ಒಪ್ಪಿಕೊಂಡರೂ, ವ್ಯವಸ್ಥೆ ಅವುಗಳನ್ನು ಗಮನಿಸಿಯೂ ಗಮನಿಸದ ಹಾಗೆ ದಿವ್ಯ ನಿರ್ಲಕ್ಷ್ಯ ತೋರಿಬಿಡುತ್ತದೆ. ಅಥವಾ ಅಗತ್ಯಕ್ಕಿಂತಲೂ ಅತಿಯಾಗಿ 'ಹೆಣ್ಣು' ಎಂಬ ಕಾರಣಕ್ಕೆ ವೈಭವೀಕರಿಸುತ್ತಾ ನಿಜವಾಗಿಯೂ ಶಕ್ತ, ಯೋಗ್ಯ ಪ್ರಯೋಗಗಳನ್ನೂ, ಅದು ಕೇವಲ ಹೆಣ್ಣಿನ ಸಾಧನೆ ಎಂದು ಮಿತಿ ಮಾಡಿಬಿಡುವ ಧೋರಣೆಗಳೂ ಕಾಣಿಸುತ್ತವೆ. ಬೇರೆ ಬೇರೆಯ ಪ್ರಯೋಗಗಳ ಹಾಗೆ ಅವಳ ಪ್ರಯೋಗವನ್ನು 'ಒಂದು ಪ್ರಯೋಗ'ವನ್ನಾಗಿ ಯಾಕೆ ಪರಿಗಣಿಸುವುದಿಲ್ಲ?

ಇವತ್ತು ರಂಗಭೂಮಿಯಲ್ಲಿ ಮಹಿಳೆ ರಂಗದ ಹೊರಗಡೆಯ ತೊಡಕುಗಳ ಜೊತೆಯಲ್ಲೇ, ರಂಗದ ಒಳಗಿರುವ ತೊಡಕುಗಳನ್ನು ನಿಭಾಯಿಸಬೇಕಾಗಿದೆ. ರಂಗದೊಳಗಿರುವವರ ನಿರ್ಲಕ್ಷ್ಯಗಳನ್ನು, ಅವರ ಅತಿಯಾದ ಹೊಗಳುವಿಕೆಯನ್ನು, ಅಯ್ಯೋ ಪಾಪ ಎಂಬಂಥ ಧೋರಣೆಗಳಿಗೆ ಸೊಪ್ಪು ಹಾಕದೆ ನಮ್ಮೆದುರು ಇರುವ ಇವತ್ತಿನ ಸವಾಲುಗಳಿಗೆ ಧೈರ್ಯವಾಗಿ ಉತ್ತರಿಸುವ ಛಾತಿಯನ್ನು ಬೆಳೆಸಿಕೊಳ್ಳಬೇಕಾಗಿದೆ. ಸಮಾಜದ ಒತ್ತಡ, ಕೌಟುಂಬಿಕ ಒತ್ತಡಗಳ ಜೊತೆಯಲ್ಲೇ ರಂಗಭೂಮಿಯ ಒತ್ತಡಗಳನ್ನು ತಡೆದುಕೊಳ್ಳಲೇಬೇಕಾದ ಶಕ್ತಿಯನ್ನು ನಮ್ಮ ಕೆಲಸಗಳ ಮೂಲಕವೇ ಪಡೆದುಕೊಳ್ಳಬೇಕಾಗಿದೆ. ನಮ್ಮ ಅಂತರಂಗವನ್ನು ನಾವೇ ಸಮರ್ಥವಾಗಿ ಅಭಿವ್ಯಕ್ತಿಸಲು ಅದಕ್ಕೆ ಬೇಕಾದ ಎಲ್ಲ ಸಿದ್ಧತೆಗಳೊಂದಿಗೆ ಎದುರಾಗಬೇಕಿದೆ. ಸ್ತ್ರೀಪಾತ್ರಗಳು ಸ್ತ್ರೀಯರಿಂದಲೇ ರಚಿತವಾಗಬೇಕಾಗಿದೆ. ನಮ್ಮ ಅನುಭವಗಳು ಕೇವಲ ಹಸಿ ಹಸಿ ಅಭಿವ್ಯಕ್ತಿಯಾಗದೆ ಅದೊಂದು ಸಾರ್ವಕಾಲಿಕ ಸತ್ಯವಾಗಿ ಗೋಚರಿಸಬೇಕಾಗಿದೆ. ಘನತೆಯಿಂದ ಕೂಡಿದ ಚರ್ಚೆಯಾಗಬೇಕಾಗಿದೆ. ನಮ್ಮಲ್ಲಿ ನಾಟಕಕಾರ್ತಿಯರು ಬೆರಳೆಣಿಕೆಯಷ್ಟೆ ಇದ್ದಾರೆ. ರಂಗಭೂಮಿಯಲ್ಲಿ ಸ್ತ್ರೀಯರೇ ಇಲ್ಲದ ಕಾಲದಿಂದಲೂ ನಡೆಸಿದ ಪ್ರಯಾಣಕ್ಕೆ ಉತ್ತರವಾಗಿ ಇಂದು ನಾಟಕಕಾರ್ತಿಯರು, ನಿರ್ದೇಶಕಿಯರು, ನಟಿಯರು ತಮ್ಮ ಸ್ತ್ರೀಪ್ರಜ್ಞೆಯ ಮೂಲಕ ಪಾತ್ರಗಳನ್ನು ಹೊಸನೆಲೆಯಲ್ಲಿ ನೋಡುವ ಪ್ರಯತ್ನಗಳನ್ನು ಹೆಚ್ಚು ಹೆಚ್ಚು ಮಾಡಬೇಕಾಗಿದೆ. ರಂಗಭೂಮಿಯಲ್ಲಿ ಪುರುಷಪ್ರಪಂಚದ ನಡುವೆ



ಇದ್ದೂ ಇದ್ದೂ ಮಹಿಳೆಯರೂ ಕೆಲವೊಮ್ಮೆ ಪುರುಷರಂತೆಯೇ ಯೋಚಿಸಿಬಿಡಬಹುದಾದ ಅಪಾಯಗಳಿಂದ ತಪ್ಪಿಸಿಕೊಂಡು ತಮ್ಮ ಸ್ತ್ರೀಪ್ರಜ್ಞೆಯನ್ನು ಜಾಗೃತವಾಗಿಟ್ಟುಕೊಂಡು, ಮಾನವೀಯವಾಗಿ ಪಾತ್ರಗಳನ್ನು ಅರ್ಥೈಸುವ, ಗ್ರಹಿಸುವ, ಅಭಿವ್ಯಕ್ತಿಸುವ ಸ್ವಾತಂತ್ರ್ಯವನ್ನು ತೆಗೆದುಕೊಳ್ಳಬೇಕಾಗಿದೆ. ಮರಳಿ ಮರಳಿ ಇಂಥ ಪ್ರಯತ್ನಗಳು ನಡೆದಂತೆ ನಾವು ಬಯಸುವ ಸ್ತ್ರೀಪ್ರಪಂಚದ ಅನಾವರಣ ಆಗಬಹುದೆಂದು ಆಶಿಸೋಣ.

*(ಮುಗಿಯಿತು)*


**ಲೇಖನ ಸಿದ್ಧಪಡಿಸಲು ಸಹಾಯಕ್ಕೆ ಬಂದ ಗ್ರಂಥಗಳು, ಲೇಖನಗಳು, ಸಂದರ್ಶನಗಳು**

* **ಕನ್ನಡ ರಂಗಭೂಮಿಯ ವಿಕಾಸ**
  *ಡಾ. ಹೆಚ್.ಕೆ. ರಾಂನಾಥ್*
* **ಕನ್ನಡ ನಾಟಕಗಳಲ್ಲಿ ಸ್ತ್ರೀಲೋಕ**
  *ಡಾ. ಹೇಮಾ ಪಟ್ಟಣಶೆಟ್ಟಿ*
* **ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿ**
  *ಡಾ. ರಾಮಕೃಷ್ಣ ಮರಾಠೆ*
* **ಆಧುನಿಕ ಕನ್ನಡ ನಾಟಕ**
  *ಡಾ. ಕೆ. ಮರುಳಸಿದ್ದಪ್ಪ*
* **ಮಹಿಳಾ ವಿಷಯ**
  *ಡಾ. ಮಮತಾ ಸಾಗರ*
* **ಕಲೆಯೇ ಕಾಯಕ**
  *ಗುಬ್ಬಿ ವೀರಣ್ಣ*
* Economic and Political Weekly Oct26, 1991
* ಡಾ. ವಿಜಯಾ ಅವರ ಲೇಖನಗಳು
  *(ಹೊಸತು ಮಾಸ ಪತ್ರಿಕೆಯಲ್ಲಿ)*
* ಸೂತ್ರದಾರ, ಸುಧಾ ಪತ್ರಿಕೆಯಲ್ಲಿನ ಲೇಖನಗಳು
* ಸಂದರ್ಶನಗಳು _ ಮಾಲತಮ್ಮ, ಬಿ. ಜಯಶ್ರೀ, ಲಕ್ಷ್ಮಿ ಚಂದ್ರಶೇಖರ್, ರಂಗಾಯಣದ ಕಲಾವಿದೆಯರು ಸುರಭಿ ಕಲಾವಿದೆಯರು.


## ಒಂದೇ ಹಾಡು

ನಮ್ಮೆಲ್ಲರದೂ ಒಂದೇ ಹಾಡು
ನಾಡಿಗಳ ಬಡಿತ
ತನುಮನಗಳ ಮಿಡಿತ
ಆತ್ಮದ ಕಂಪನಗಳು
ಹೃದಯದ ಏರಿಳಿತಗಳು
ಅಂತರಂಗದ ಹಾಡು
ಒಂದೇ ಒಂದೇ ಹಾಡು
ಪಸೆಯ ಜಾಡು ಹಿಡಿದ
ಭೂಮಿಯ ಒಡಲಲಿ ಚಿಗುರು
ಮೊಳಕೆ ಮೂಡಿದ ಬೀಜ
ನಾಡಿ ಬಡಿತವೊಂದೇ
ಬೇರುಗಳ ಜಾಲ
ಹರಡುವಿಕೆ-ಹೀರುವಿಕೆ
ಜೀವಜಾಲದ ಪಸರಿಕೆಯೊಂದೇ
ಭೂಮಿ ಆಗಸದಲ್ಲಿ
ಹರಡಿದ ಪಸೆಯೊಂದೇ
ಧರೆಗೆ ಹನಿಹನಿಯಾಗಿ
ಇಳಿದು ಬರುವ ಶಬ್ದವೊಂದೇ
ನಮ್ಮೆಲ್ಲರದೂ ಒಂದೇ ಹಾಡು
ತನುಮನಗಳ ಮಿಡಿತ
ನಾಡಿಗಳ ಬಡಿತವೊ
ಆತ್ಮಗಳ ಚುರುಗುಟ್ಟುವಿಕೆ
ಹೃದಯಗಳ ಮರಗಟ್ಟುವಿಕೆ
ಅಂತರಂಗದ ಕರಗುವಿಕೆ
ನಮ್ಮೆಲ್ಲರದೂ ಒಂದೇ ಹಾಡು
ಗೆಳತಿ, ಒಂದೇ ಹಾಡು.

■ *ಡಾ. ಕೆ. ಷರೀಫಾ*

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2010-12

# ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ-ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at MBC, Bangalore GPO*
*Total No. of Pages: 24*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ
ಚಾಮರಾಜಪೇಟೆ
ಬೆಂಗಳೂರು - 560 018